ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜೂನ್ ೯, ೨೦೧೬ (ಜ್ಯೇಷ್ಠ ೧೯, ಶಕ ವರ್ಷ ೧೯೩೮)<br>Bengaluru, Thursday, June 9, 2016 (Jyeishta 19, Shaka Varsha 1938) | ಸಂಚಿಕೆ ೨೩<br>Issue 23 |
|---|---|---|

# ಭಾಗ ೫

# ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು**

**(ಕರ್ನಾಟಕ ಸರ್ಕಾರದ ಒಂದು ಉದ್ದಿಮೆ)**

**ವಿಳಾಸ: "ವನವಿಕಾಸ", 1ನೇ ಮಹಡಿ, 18ನೇ ಅಡ್ಡರಸ್ತೆ, ಮಲ್ಲೇಶ್ವರ, ಬೆಂಗಳೂರು–560 003**

**ಅಧಿಸೂಚನೆ**

**ಸಂಖ್ಯೆ: ಕಅನಿನಿ/ಎ1/ನೇನ/2016–17/236, ದಿನಾಂಕ:03.05.2016.**

**ನಿಗಮದ ಹಲವು ಹುದ್ದೆಗಳಿಗೆ ನೇರ ನೇಮಕಾತಿ**

ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತದ ವೃಂದ ಮತ್ತು ನೇಮಕಾತಿ ನಿಯಮಗಳಂತೆ ಈ ಕೆಳಕಂಡ ಹುದ್ದೆಗಳಿಗೆ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ:

1. ನೆಡುತೋಪು ಅಧೀಕ್ಷಕರು – 8 ಹುದ್ದೆಗಳು
2. ಸಹಾಯಕ ನೆಡುತೋಪು ಅಧೀಕ್ಷಕರು – 30 ಹುದ್ದೆಗಳು
3. ಅರಣ್ಯ ರಕ್ಷಕರು – 32 ಹುದ್ದೆಗಳು

2. **ಅರ್ಜಿ ಸಲ್ಲಿಸುವ ವಿಧಾನ :**

ಅರ್ಜಿ, ಅಧಿಸೂಚನೆ ಮತ್ತು ಪಠ್ಯಕ್ರಮ (Syllabus) ಇವುಗಳನ್ನು ನಿಗಮದ ವೆಬ್‌ಸೈಟ್: www.kfdcl.kar.nic.in ನಲ್ಲಿ ಪ್ರಕಟಿಸಲಾಗುವುದು. ಅರ್ಜಿಯನ್ನು Online ಮುಖಾಂತರ ಅಭ್ಯರ್ಥಿಗಳು ಸಲ್ಲಿಸತಕ್ಕದ್ದು. ಇದನ್ನು ಹೊರತುಪಡಿಸಿ ಯಾವುದೇ ವಿಧದಲ್ಲಿ ಅರ್ಜಿಯನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. Online ಅರ್ಜಿಯನ್ನು ತುಂಬಲು ಸಹಾಯಕವಾಗುವ ಸೂಚನೆಗಳನ್ನು ನಿಗಮದ ವೆಬ್‌ಸೈಟ್ ನಲ್ಲಿ ನೀಡಲಾಗುವುದು. ಒಬ್ಬ ಅಭ್ಯರ್ಥಿ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು Online ಮುಖಾಂತರ ಸಲ್ಲಿಸಬಾರದು. Online ನಲ್ಲಿ ಅರ್ಜಿಯನ್ನು ಸಲ್ಲಿಸಿದ ನಂತರ ಅಭ್ಯರ್ಥಿಗಳು ತಾವು Online ಮುಖಾಂತರ ಸಲ್ಲಿಸಿದ ಅರ್ಜಿಯ ಒಂದು ಮುದ್ರಿತ ಪ್ರತಿಯನ್ನು ತೆಗೆದುಕೊಂಡು, ಇ–ಪಾವತಿ ಸೌಲಭ್ಯವಿರುವ ಅಂಚೆ ಕಛೇರಿಯಲ್ಲಿ ಮುದ್ರಿತ ಅರ್ಜಿ ಪ್ರತಿಯನ್ನು ತೋರಿಸಿ, ನಿಗದಿತ ಅರ್ಜಿ ಶುಲ್ಕ ಮತ್ತು ಸೇವಾ ಶುಲ್ಕವನ್ನು ಅಭ್ಯರ್ಥಿಗಳು ಪಾವತಿಸತಕ್ಕದ್ದು. ಅಂಚೆ ಕಛೇರಿಯಲ್ಲಿ ದಿನಾಂಕ 20.06.2016ರ ಕಛೇರಿ ವ್ಯವಹಾರದ ವೇಳೆಯ ಮುಕ್ತಾಯದ ಸಮಯದೊಳಗೆ ಶುಲ್ಕವನ್ನು ಪಾವತಿಸಬಹುದಾಗಿರುತ್ತದೆ.

**ಸೂಚನೆ** :ಆನ್‌ಲೈನ್‌ನಲ್ಲಿ ಅರ್ಜಿಯನ್ನು ಸಲ್ಲಿಸದೇ ನೇರವಾಗಿ ಕೊರಿಯರ್, ನೋಂದಾಯಿತ ಅಂಚೆ, ಮುದ್ದಾಂ, ಇತ್ಯಾದಿ ವಿಧಾನಗಳ ಮುಖಾಂತರ ಕಳುಹಿಸಿದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

2.1 ಅರ್ಜಿ ಸಲ್ಲಿಸುವಾಗ ಜನ್ಮ ದಿನಾಂಕ ದೃಢೀಕರಿಸುವ ಪ್ರಮಾಣ ಪತ್ರ, ಶೈಕ್ಷಣಿಕ ಪ್ರಮಾಣ ಪತ್ರಗಳು, ಜಾತಿ / ಪ್ರವರ್ಗ ದೃಢೀಕರಿಸುವ ಪ್ರಮಾಣ ಪತ್ರಗಳು, ಗ್ರಾಮೀಣ, ಕನ್ನಡ ಮಾಧ್ಯಮ, ಯೋಜನಾ ನಿರಾಶ್ರಿತ, ಕುಷ್ಠರೋಗದಿಂದ ಗುಣಮುಖ ಹೊಂದಿದ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರ, ಸೈನಿಕ ಸೇವೆ ದೃಢೀಕರಣ ಪ್ರಮಾಣ ಪತ್ರಗಳನ್ನು ಸ್ಕ್ಯಾನ್ ಮಾಡಿ ನಿಗಮದ ವೆಬ್‌ಸೈಟ್‌ಗೆ ಅರ್ಜಿ ಸಲ್ಲಿಸುವ ವೇಳೆಯಲ್ಲಿ ಅಪ್‌ಲೋಡ್ ಮಾಡತಕ್ಕದ್ದು. ಅಭ್ಯರ್ಥಿಯು ಯಾವ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ವೇಳೆ ಅಪ್‌ಲೋಡ್ ಮಾಡಿರುತ್ತಾರೆಯೋ ಅದೇ ಪ್ರಮಾಣ ಪತ್ರವನ್ನು ಎಲ್ಲಾ ಹಂತದಲ್ಲೂ ಪರಿಗಣನೆಗೆ ತೆಗೆದುಕೊಳ್ಳಲಾಗುವುದು. ಇದನ್ನು ಯಾವ ಹಂತದಲ್ಲಿಯೂ ಬದಲಾವಣೆ ಮಾಡಲು ಅವಕಾಶವಿರುವುದಿಲ್ಲ.

**2.2** **ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ – 19.05.2016**

**ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ – 18.06.2016**

**ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ – 20.06.2016(ಅಂಚೆ ಕಛೇರಿಯ ಕಾರ್ಯದ ವೇಳೆಯೊಳಗೆ)**

2.3 ಮೂಲ ದಾಖಲೆಗಳ ಪರಿಶೀಲನೆ, ಪೂರ್ವಭಾವಿ ಪರೀಕ್ಷೆ ದಿನಾಂಕ, ಪರೀಕ್ಷೆ ನಡೆಯುವ ಸ್ಥಳ ಮತ್ತು ವೇಳೆಯನ್ನು ನಿಗಮದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

2.4 ಅರ್ಹ ಅಭ್ಯರ್ಥಿಗಳಿಗೆ ಪ್ರವೇಶ ಪತ್ರ, ಮೂಲ ದಾಖಲೆಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆ ನಡೆಯುವ ಸ್ಥಳ ಮತ್ತು ವೇಳೆಯನ್ನು ನಿಗಮದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಮೂಲ ದಾಖಲೆಗಳ ಪರೀಕ್ಷೆ ನಡೆಯುವ ದಿನಾಂಕ, ವೇಳಾಪಟ್ಟಿ, ಪರೀಕ್ಷಾ ಕೇಂದ್ರಗಳ ವಿವರಗಳ ಪ್ರವೇಶ ಪತ್ರವನ್ನು ಅರ್ಹ ಅಭ್ಯರ್ಥಿಗಳು ನಿಗಮದ ವೆಬ್‌ಸೈಟ್‌ನಿಂದ ಡೌನ್‌ಲೋಡ್ ಮಾಡುವುದು. ಇದನ್ನು ಹೊರತುಪಡಿಸಿ ಅಂಚೆ ಮುಖಾಂತರ ಪ್ರವೇಶ ಪತ್ರವನ್ನು ಕಳುಹಿಸಲಾಗುವುದಿಲ್ಲ.

**3. ಅರ್ಜಿ ಶುಲ್ಕ :**

ಅ) ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ಪ್ರವರ್ಗ–1 = ₹. 50/– + ₹. 12/– ಸೇವಾ ಶುಲ್ಕ

ಆ) ಇತರರು= ₹. 100/– + ₹. 12/– ಸೇವಾ ಶುಲ್ಕ

4. **ಅಭ್ಯರ್ಥಿಯು ಅರ್ಜಿಯನ್ನು ಸಲ್ಲಿಸುವ ಮೊದಲು, ಸಂಬಂಧಿಸಿದ ಪ್ರಾಧಿಕಾರಗಳಿಂದ ಅವಶ್ಯವಿರುವ ಎಲ್ಲಾ ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡು, ಸದರಿ ಮೂಲ ದಾಖಲೆ / ಪ್ರಮಾಣ ಪತ್ರಗಳಲ್ಲಿರುವ ಮಾಹಿತಿಯನ್ನು ಸರಿಯಾಗಿ, ಸ್ಪಷ್ಟವಾಗಿ ಮತ್ತು ಸಮರ್ಪಕವಾಗಿ ನಿಗದಿತ ಅರ್ಜಿಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.** ಇತರೆ ನಮೂನೆಗಳಲ್ಲಿ ಅಥವಾ ಜೆರಾಕ್ಸ್ ಪ್ರತಿಗಳಲ್ಲಿ ಭರ್ತಿ ಮಾಡಿ ಸಲ್ಲಿಸುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿದ ಮೂಲ ಅರ್ಜಿಯ ಒಂದು ಪ್ರತಿಯನ್ನು download ಮಾಡಿ ತಮ್ಮ ಬಳಿ ಇಟ್ಟುಕೊಳ್ಳತಕ್ಕದ್ದು.

**5. ಮೂಲ ದಾಖಲೆ / ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆಗಳು :**

**5.1 ಮೂಲ ದಾಖಲೆ / ಪ್ರಮಾಣ ಪತ್ರಗಳ ಪರಿಶೀಲನೆ :**

ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ಮತ್ತು ಅರ್ಜಿಯೊಂದಿಗೆ ಅಪ್‌ಲೋಡ್ ಮಾಡಿರುವ ಎಲ್ಲಾ ದಾಖಲಾತಿಗಳ ಆಧಾರದ ಮೇಲೆ ಅರ್ಜಿಯನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದು. ಕ್ರಮಬದ್ಧವಲ್ಲದ, ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಪ್ರಾರಂಭಿಕ ಹಂತದಲ್ಲಿಯೇ ತಿರಸ್ಕರಿಸಲಾಗುವುದು. ಇದಲ್ಲದೆ ಅಪ್‌ಲೋಡ್ ಮಾಡಬೇಕಾಗಿರುವ ದಾಖಲೆಗಳ ಪೈಕಿ ಯಾವುದಾದರೂ ದಾಖಲೆಗಳನ್ನು ಅಪ್‌ಲೋಡ್ ಮಾಡದೆ ಇದ್ದಲ್ಲಿ ಅಭ್ಯರ್ಥಿಯ ಅರ್ಜಿಯನ್ನು ತಿರಸ್ಕರಿಸಲಾಗುವುದು.

ಸಂಕ್ಷಿಪ್ತಗೊಳಿಸಿದ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿ/ ವಿವರಗಳಿಗೆ ಪೂರಕವಾಗಿ ವಯಸ್ಸು, (ಜನ್ಮ ದಿನಾಂಕ ತಿಳಿಯಲು ಎಸ್.ಎಸ್.ಎಲ್.ಸಿ ಅಂಕಪಟ್ಟಿ/ಶಾಲಾ ದಾಖಲಾತಿ ಪ್ರಮಾಣ ಪತ್ರಗಳು) ಶೈಕ್ಷಣಿಕ ಅರ್ಹತೆ, ಮೀಸಲಾತಿ, ಇತ್ಯಾದಿ ಬಗ್ಗೆ ಮೂಲ ದಾಖಲೆ/ ಮೂಲ ಪ್ರಮಾಣ ಪತ್ರಗಳು ಮತ್ತು ಇವುಗಳ ಒಂದು ಜೆರಾಕ್ಸ್ ಪ್ರತಿಯನ್ನು ಸೂಚಿತ ದಿನಾಂಕದಂದು ಸಂಬಂಧಿಸಿದ ಅಧಿಕಾರಿಗಳ ಎದುರು ಪರಿಶೀಲನೆಗೆ ಕಡ್ಡಾಯವಾಗಿ ಹಾಜರುಪಡಿಸಬೇಕು. ಸದರಿ ಮೂಲ ದಾಖಲೆ/ ಪ್ರಮಾಣ ಪತ್ರಗಳನ್ನು ಹಾಜರುಪಡಿಸಲು ಯಾವುದೇ ಕಾರಣಕ್ಕೂ ಮತ್ತು ಯಾವುದೇ ಸನ್ನಿವೇಶದಲ್ಲಿಯೂ ಕಾಲ ವಿಸ್ತರಣೆ ನೀಡಲಾಗುವುದಿಲ್ಲ. ಅಭ್ಯರ್ಥಿಯು ತನ್ನ ಅರ್ಜಿ ನಮೂನೆಯಲ್ಲಿ ನಮೂದಿಸಿರುವ ಮಾಹಿತಿ/ವಿವರಗಳನ್ನು ನಿಯಮಾನುಸಾರ ಪರಿಗಣಿಸಲಾಗುವುದು. ಒಂದು ವೇಳೆ ನಮೂದಿಸಿರುವ ಮಾಹಿತಿಗೆ ವ್ಯತಿರಿಕ್ತ ದಾಖಲೆ/ ಪ್ರಮಾಣ ಪತ್ರಗಳನ್ನು ಸಲ್ಲಿಸಿದಲ್ಲಿ ಅಂತಹ ದಾಖಲೆ/ ಪ್ರಮಾಣ ಪತ್ರಗಳನ್ನು ಪರಿಗಣನೆಗೆ ತೆಗೆದುಕೊಂಡು ಬದಲಾವಣೆ ಮಾಡಲಾಗುವುದಿಲ್ಲ. ಮೂಲ ದಾಖಲೆ/ ಪ್ರಮಾಣ ಪತ್ರಗಳನ್ನು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸದ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು ಹಾಗೂ ಅವರನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. **ಅಭ್ಯರ್ಥಿಯು ಎಲ್ಲಾ ಸಂಧರ್ಭದಲ್ಲಿ ಒಂದೇ ತರಹದ ದಾಖಲೆಗಳನ್ನು ಸಲ್ಲಿಸತಕ್ಕದ್ದು. ಈ ಬಗ್ಗೆ ಅಭ್ಯರ್ಥಿ ಬಹಳ ಎಚ್ಚರಿಕೆ ವಹಿಸಲು ಸೂಚಿಸಿದೆ. ವಿಭಿನ್ನ ಮಾಹಿತಿಗಳನ್ನು ಸಲ್ಲಿಸಿದ್ದಲ್ಲಿ, ಅಭ್ಯರ್ಥಿಯ ಅರ್ಜಿಯನ್ನು ತಿರಸ್ಕರಿಸಲಾಗುವುದು.**

5.2 ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವಾಗ ಹುದ್ದೆಗೆ ನಿಗಧಿಪಡಿಸಿರುವ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ ಆಯಾ ವಿಶ್ವವಿದ್ಯಾಲಯವು ನಿಗಧಿಪಡಿಸಿರುವ ಗರಿಷ್ಠ ಅಂಕಗಳನ್ನು ಹಾಗೂ ಅಭ್ಯರ್ಥಿಯು ಎಲ್ಲಾ ವಿಷಯಗಳಲ್ಲಿ ಗಳಿಸಿರುವ ಒಟ್ಟು ಅಂಕಗಳನ್ನು (ಎಲ್ಲಾ ವಾರ್ಷಿಕ/ಸೆಮಿಸ್ಟರ್ ಪರೀಕ್ಷೆಗಳ ಅಂಕಗಳನ್ನು ಕೂಡಿ) ತನ್ನ ಅರ್ಜಿಯಲ್ಲಿ ಸರಿಯಾಗಿ ಮತ್ತು ಸ್ಪಷ್ಟವಾಗಿ ನಮೂದಿಸುವುದು. ಅಸ್ಪಷ್ಟ / ತಪ್ಪು / ಅಪೂರ್ಣ ಮಾಹಿತಿ ನೀಡಿದ್ದಲ್ಲಿ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು ಹಾಗೂ ಅವರನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

5.3 ಅಭ್ಯರ್ಥಿಯು ಅರ್ಜಿ ನಮೂನೆಯಲ್ಲಿ ಮೀಸಲಾತಿ ಮತ್ತು ಕೋರುವ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ಅರ್ಜಿಯಲ್ಲಿ ನೀಡಿರುವ ಸಂಬಂಧಿಸಿದ ಕಾಲಂಗಳಲ್ಲಿ ತಪ್ಪದೇ ನಮೂದಿಸಬೇಕು. ಒಂದು ವೇಳೆ ಸದರಿ ವಿವರಗಳನ್ನು ಅರ್ಜಿಯಲ್ಲಿ ನಮೂದಿಸದಿದ್ದರೆ ಅಂತಹ ಅಭ್ಯರ್ಥಿಯು ಮೀಸಲಾತಿ / ಕೋರುವ ಇತರೆ ಸೌಲಭ್ಯಗಳಿಂದ ವಂಚಿತರಾಗುತ್ತಾರೆ.

**6. ಲಿಖಿತ ಪರೀಕ್ಷೆ :**

**6.1 ಲಿಖಿತ ಪರೀಕ್ಷೆಯ ವಿಷಯಗಳು :**

ಲಿಖಿತ ಪರೀಕ್ಷೆಯ ಪಠ್ಯಕ್ರಮ (Syllabus) ಹುದ್ದೆಗೆ ನಿಗಧಿಪಡಿಸಿರುವ ವಿದ್ಯಾರ್ಹತೆಯ ಮಟ್ಟದಲ್ಲಿ ಇರುತ್ತದೆ.

**6.2 ಲಿಖಿತ Aptitude ಪರೀಕ್ಷಾ ಕೇಂದ್ರ :**

ಲಿಖಿತ Aptitude ಪರೀಕ್ಷೆಗಳನ್ನು ನಡೆಸುವ ದಿನಾಂಕ ಹಾಗೂ ಸ್ಥಳವನ್ನು ನಿಗಮದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

**ವಿಶೇಷ ಸೂಚನೆ :– ಅಭ್ಯರ್ಥಿಗಳು ನೇಮಕಾತಿ ಪರೀಕ್ಷೆಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.**

7. ಎಸ್.ಎಸ್.ಎಲ್.ಸಿ. ಹಾಗೂ ಅದಕ್ಕಿಂತ ಮೇಲ್ಮಟ್ಟದ ವಿದ್ಯಾಭ್ಯಾಸದಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಸಿಸದೇ ಇರುವ ಅಭ್ಯರ್ಥಿಗಳಿಗೆ ಕರ್ನಾಟಕ ಸಿವಿಲ್ ಸೇವೆಗಳು (ನೇಮಕಾತಿ) (ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1984ಕ್ಕೆ ಪೂರಕವಾಗಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಎಸ್‌ಸಿಆರ್ 84 ದಿನಾಂಕ 23–9–1985 ರಲ್ಲಿ ಸೂಚಿಸಿದ ಪ್ರಕಾರ ಅಂತಹ ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಲು ನಿಗಧಿಪಡಿಸಿದ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರವೇ ಅಭ್ಯರ್ಥಿಗಳು ನೇಮಕಾತಿ ಹೊಂದಲು ಅರ್ಹರಾಗುತ್ತಾರೆ. ಕನ್ನಡ ಭಾಷಾ ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**7.1 ಕನ್ನಡ ಭಾಷಾ ಪರೀಕ್ಷೆಯ ಪಠ್ಯಕ್ರಮ :**

**7.1.1** ಕನ್ನಡ ಭಾಷಾ ಪರೀಕ್ಷೆಯನ್ನು ಎರಡು ಹಂತದಲ್ಲಿ ನಡೆಸಲಾಗುತ್ತದೆ. ಇದರ ವಿವರ ಕೆಳಗೆ ನಮೂದಿಸಿದೆ. ಸಮಯ: 1.00 ಗಂಟೆ

| | | |
|---|---|---|
| ಮೊದಲನೇ ಹಂತ – ಲಿಖಿತ ಪರೀಕ್ಷೆ : | ಲಿಖಿತ ಪರೀಕ್ಷೆಗೆ ಕನ್ನಡ ಶಾಲಾ ನಾಲ್ಕನೇ ತರಗತಿಯ ಕನ್ನಡ ಮುಖ್ಯ ಪಠ್ಯಪುಸ್ತಕ ಹಾಗೂ ವಿವಿಧ ಲೇಖಕರು ಬರೆದ ಕರ್ನಾಟಕ ವಯಸ್ಕರ ಶಿಕ್ಷಣ ಪರಿಷತ್ತು ಪ್ರಕಟಿಸಿರುವ "ಸತ್ಯಕ್ಕೆಬೆಲೆ ಕೊಟ್ಟ ಗೆಳೆಯರು" ಎಂಬ ಪಾಠದಿಂದ ಆರಂಭವಾಗುವಸಣ್ಣಕಥೆಗಳು ಇವುಗಳಿಂದ ಪ್ರಶ್ನೆಗಳನ್ನು ಕೊಡಲಾಗುವುದು. | 90 ಅಂಕಗಳು |
| ಎರಡನೇ ಹಂತ –ಮೌಖಿಕ ಪರೀಕ್ಷೆ : | ಅ) ಮುದ್ರಿತ ಹಾಗೂ ಹಸ್ತ ಪ್ರತಿಗಳನ್ನು ಓದುವುದು.<br>ಆ) ಅರ್ಜಿಗಳನ್ನು ಓದಿ ವಿವರಿಸುವುದು.<br>ಇ) ಸಂಭಾಷಣೆ ನಡೆಸುವುದು. | 10 ಅಂಕಗಳು |

7.1.2 ಈ ಕೆಳಗಿನ ಮಟ್ಟದಲ್ಲಿ ಮೂರು ವಿಧದಲ್ಲಿ ಕನಿಷ್ಠ ಅಂಕಗಳನ್ನು ಪಡೆದವರು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವರೆಂದು ಪರಿಗಣಿಸಲಾಗುವುದು.

(ಅ) ಲಿಖಿತ ಪರೀಕ್ಷೆಯಲ್ಲಿ ಪಡೆಯತಕ್ಕ ಕನಿಷ್ಠ ಅಂಕಗಳು: 30

(ಆ) ಮೌಖಿಕ ಪರೀಕ್ಷೆಯಲ್ಲಿ ಪಡೆಯತಕ್ಕ ಕನಿಷ್ಠ ಅಂಕಗಳು: 3

(ಇ) ಲಿಖಿತ ಪರೀಕ್ಷೆಯಲ್ಲಿ ಮತ್ತು ಮೌಖಿಕ ಪರೀಕ್ಷೆಯಲ್ಲಿ ಒಟ್ಟಿಗೆ ಪಡೆಯತಕ್ಕ ಕನಿಷ್ಠ ಅಂಕಗಳು: 35

**8. ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರುವ ಅಭ್ಯರ್ಥಿಗಳು ಸಲ್ಲಿಸಬೇಕಾದ ದಾಖಲೆ/ಪ್ರಮಾಣ ಪತ್ರಗಳ ವಿವರ ಕೆಳಕಂಡಂತಿದೆ :**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಕಿ 132 ಎಸ್‌ಎಡಿ 97, ದಿನಾಂಕ 08.02.2000 ರನ್ವಯ, ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರ ಹಾಗೂ ಆದಾಯ ಪ್ರಮಾಣ ಪತ್ರ, ಇತ್ಯಾದಿ ಮೀಸಲಾತಿ ಕುರಿತು ಪ್ರಮಾಣ ಪತ್ರಗಳನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು.

8.1 ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಡಿ" ರಲ್ಲಿ ಪಡೆದಿರಬೇಕು.

**8.2** ಪ್ರವರ್ಗ–I ಕ್ಕೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಇ" ರಲ್ಲಿ ಪಡೆದಿರಬೇಕು.

**8.3** ಪ್ರವರ್ಗ– IIಎ, IIಬಿ, IIIಎ ಮತ್ತು IIIಬಿ ಗೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ನೀಡಲಾದ ಆದಾಯ ಮತ್ತು ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಎಫ್" ರಲ್ಲಿ ಪಡೆದಿರಬೇಕು.

**ವಿಶೇಷ ಸೂಚನೆ :–** "ನಮೂನೆ–ಎಫ್"ಪ್ರಮಾಣ ಪತ್ರವು ಅಧಿಸೂಚನೆಯ ದಿನಾಂಕಕ್ಕೆ ಐದು(5) ವರ್ಷಗಳಿಗಿಂತ ಹೆಚ್ಚು ಹಳೆಯ ಸಮಯದ್ದಾಗಿರಬಾರದು. ಅವಧಿ ಮೀರಿದ ಪ್ರಮಾಣ ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

**8.4** ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಯು ಸಂಬಂಧಪಟ್ಟ ತಹಶೀಲ್ದಾರ್‌ರಿಂದ ನೀಡಿರುವ ಪ್ರಮಾಣ ಪತ್ರವನ್ನು ಪಡೆದಿರಬೇಕು.

**8.5** ಮಾಜಿ ಸೈನಿಕ ಅಭ್ಯರ್ಥಿಗಳು ಸಂಬಂಧಪಟ್ಟ ಘಟಕದಿಂದ ಡಿಸ್‌ಚಾರ್ಜ್ ಹೊಂದಿದ ಬಗ್ಗೆ ಮೂಲ ಪ್ರಮಾಣ ಪತ್ರ ಮತ್ತು ಪೆನ್‌ಷನ್ ಪಡೆಯುತ್ತಿರುವ ಬಗ್ಗೆ ದಾಖಲೆ ಪತ್ರ ಪಡೆದಿರಬೇಕು ಹಾಗೂ ಮಾಜಿ ಸೈನಿಕ ಮೀಸಲಾತಿಗೆ ನಿಯಮಾನುಸಾರ ಅರ್ಹರೇ ಎಂಬ ಬಗ್ಗೆ ಪ್ರಮಾಣ ಪತ್ರವನ್ನು ಹತ್ತಿರದ ಸೈನಿಕ ಕಲ್ಯಾಣ ಹಾಗೂ ಪುನರ್ವಸತಿ ಇಲಾಖೆಯಿಂದ ಪಡೆದಿರಬೇಕು.

**8.6** (ಅ) ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, ಪ್ರವರ್ಗ–IIಎ, IIಬಿ, IIIಎ ಮತ್ತು IIIಬಿ. ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರಿಗೆ (ಎಲ್ಲಾ ವರ್ಷಗಳು) ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡಿದ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಾಯರಿಂದ ನೀಡಲಾದ "ನಮೂನೆ–2"ನ್ನು ಕ್ಷೇತ ಶಿಕ್ಷಣಾಧಿಕಾರಿಗಳು ಮೇಲುರುಜು ಮಾಡಿದ ಪ್ರಮಾಣ ಪತ್ರವನ್ನು ಪಡೆದಿರಬೇಕು.

(ಆ) ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ಅರ್ಹತೆಯ (General Merit) ಅಭ್ಯರ್ಥಿಗಳು ಮೇಲೆ 8.6(ಅ)ರಲ್ಲಿ ತಿಳಿಸಿರುವ "ನಮೂನೆ–2" ರ ಜೊತೆಗೆ ನಿಗಧಿತ "ನಮೂನೆ–1" ರಲ್ಲಿ ಸಂಬಂಧಪಟ್ಟ ತಹಶೀಲ್ದಾರರಿಂದ ಅವರು ಮೇಲುಸ್ಥರ (Creamy Layer) ಪರಿಮಿತಿಯಲ್ಲಿ ಬರುವುದಿಲ್ಲವೆಂದು ದೃಢೀಕರಿಸಿರುವ ಪ್ರಮಾಣ ಪತ್ರ ಪಡೆದಿರಬೇಕು.

**ವಿಶೇಷ ಸೂಚನೆ :–** ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, ಪ್ರವರ್ಗ–IIಎ, IIಬಿ, IIIಎ ಮತ್ತು IIIಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಆದಾಯ ಮತ್ತು ಜಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**8.7** ಕನ್ನಡ ಮಾಧ್ಯಮ ವರ್ಗೀಕರಣದಲ್ಲಿ ಮೀಸಲಾತಿ ಕೋರಿರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ, ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿದ ಪ್ರಮಾಣ ಪತ್ರ ಪಡೆದಿರಬೇಕು.

8.8 ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಯೋಮಿತಿ: ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸಿ ನಿಯಮಾನುಸಾರ ನಿವೃತ್ತಿ/ ಡಿಮೊಬಿಲೈಸೇಷನ್ (Demobilisation) ಅಥವಾ ರಿಟ್ರೆಂಚ್‌ಮೆಂಟ್ (Retrenchment) ಹೊಂದಿದ ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅವರು ಯಾವ ವರ್ಗಕ್ಕೆ ಸೇರಿರುತ್ತಾರೆಯೊ ಆ ಪ್ರವರ್ಗಕ್ಕೆ ನಿಗಧಿಪಡಿಸಿದ ಗರಿಷ್ಠ ವಯೋಮಿತಿ ಅವರು ಎಷ್ಟು ವರ್ಷ ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸಿರುವರೋ ಅಷ್ಟು ವರ್ಷಗಳಿಗೆ ಮೂರು (3) ವರ್ಷ ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.

**ವಿವರಣೆ : "ಮಾಜಿ ಸೈನಿಕ"** ಎಂದರೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 2(1)(i) ರಲ್ಲಿ ಅರ್ಥೈಸಿರುವಂತಾಗಿದೆ. ಈ ಪದದ ಅರ್ಥ ವಿವರಣೆ ಈ ಕೆಳಕಂಡಂತಿದೆ.

"Ex-serviceman" means a person, who has served in any rank (whether as a regular Army, Navy and Combatant or as a non-Combatant in the regular Army, Navy and Air Force of the Union but does not include a person who has served in the Defence Security Corps, the General Reserved Engineering Force, The Lok Sahayak Sena and The Para Military Force: and

(a) Who has retired from such service after earning his pension; or

(b) Who has been released from such service on medical grounds attributable to military service or circumstances beyond his control and awarded medical or other disability pension; or

(c) who has been released otherwise than on his own request from such service as a result of reduction in establishment; or

(d) who has been released from such service after completing the specific period of engagement otherwise than at his own request or by way of dismissal or discharge on account of mis- conduct or inefficieny and has been given a gratuity.

And includes personnel of the Territorial Army of following categories namely:-

(i) pension holders for continuous embodied service;

(ii) persons with disability attributable to military service; and

(iii) gallantry award winners.

**Explanation** : The persons serving in the armed forces of the union, who on retirement from service, would come under the category of ex-serviceman may be permitted to apply for re- employment one year before the completion of the specified terms of agreement and avail themselves of all concessions available to ex-serviceman, but shall not be appointed to a State Civil Service or Post until they are permitted to leave the uniform.

**8.9** ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್.ಆರ್.ಆರ್. 99 ದಿನಾಂಕ 29.11.2002 ರ ಪ್ರಕಾರ ಸಹಾಯಕ ನೆಡುತೋಪು ಅಧೀಕ್ಷಕರು, ಅರಣ್ಯ ರಕ್ಷಕರು, ಅರಣ್ಯ ವೀಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಅಭ್ಯರ್ಥಿಗಳನ್ನು ಭರ್ತಿ ಮಾಡುವ ಸಂದರ್ಭದಲ್ಲಿ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಾಗಿರುವ ಮೀಸಲಾತಿ ಅಡಿಯಲ್ಲಿ ಅಂಗವಿಕಲ ಅಭ್ಯರ್ಥಿಗಳ ಅಂದರೆ ಕುಷ್ಟರೋಗದಿಂದ ಗುಣಮುಖರಾಗಿರುವ ಅಭ್ಯರ್ಥಿಗಳನ್ನು ಮಾತ್ರ ಭರ್ತಿ ಮಾಡಲು ಅವಕಾಶವಿರುತ್ತದೆ.

**ವಿವರಣೆ :** ಕುಷ್ಟರೋಗದಿಂದ ಗುಣಮುಖರಾಗಿರುವವರು (Leprosy Cured) ಎಂದರೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರಲ್ಲಿ ಅರ್ಥೈಸಿರುವಂತಾಗಿದೆ. ಈ ಪದದ ಅರ್ಥ ವಿವರಣೆ ಈ ಕೆಳಕಂಡಂತೆ ಇದೆ:

Leprosy cured means any person who has been cured of leprosy but is suffering from

1. loss of sensation in hands or feet as well as loss of sensation and paresis in the eye and eyelid but with no manifest deformity;
2. manifest deformity and paresis but having sufficient mobility in their hands and feet to enable them to engage in normal economic activity;
3. extreme physical deformity as well as advanced age which prevents him from undertaking any gainful occupation;

and the expression "leprosy cured" shall be construed accordingly.

**9. ಹುದ್ದೆಗಳ ವಿವರ :**

**9.1 ನೆಡುತೋಪು ಅಧೀಕ್ಷಕರು – 8 ಹುದ್ದೆಗಳು.**

**9.1.1** ಅ) ಬಿ.ಎಸ್ಸಿ (ಅರಣ್ಯ ಶಾಸ್ತ್ರ) ಪಧವೀಧರರು – 6 ಹುದ್ದೆಗಳು

ಆ) ಬಿ.ಎಸ್ಸಿ (ಇತರೆ) ಅಥವಾ ಬಿ.ಇ ಪಧವೀಧರರು –2 ಹುದ್ದೆಗಳು

(ಬಿ.ಎಸ್ಸಿ/ಬಿ.ಇ ಪದವಿ ಪರೀಕ್ಷೆಗಳಲ್ಲಿ ಕನಿಷ್ಠ ಶೇಕಡ 50 ರಷ್ಟು ಅಂಕಗಳನ್ನು ಪಡೆದಿರಬೇಕು)

9.1.2 **ವೇತನ ಶ್ರೇಣಿ :** ₹. 21600–600–24600–700–28800–800–33600–900–39000–1050–40050.

9.1.3 **ಮೀಸಲಾತಿ :**

**ಅ) ಬಿ.ಎಸ್ಸಿ (ಅರಣ್ಯ ಶಾಸ್ತ್ರ) ಪಧವೀಧರರಿಗೆ ಲಭ್ಯವಾಗುವ 6 ಹುದ್ದೆಗಳ ವರ್ಗೀಕರಣ:**

| ಪ್ರವರ್ಗ | ಇತರೆ | ಗ್ರಾಮೀಣ | ಮಹಿಳೆ | ಒಟ್ಟು |
|---|---|---|---|---|
| ಪ. ಜಾತಿ | 1 | – | – | 1 |
| ಪ. ಪಂಗಡ | 1 | – | – | 1 |
| ಸಾಮಾನ್ಯ ಅರ್ಹತೆ | 1 | 1 | 1 | 3 |
| ಪ್ರವರ್ಗ–I | 1 | – | – | 1 |
| ಒಟ್ಟು | 4 | 1 | 1 | 6 |

**ಆ) ಬಿ.ಎಸ್ಸಿ (ಇತರೆ)/ ಬಿ.ಇ ಪದವೀಧರರಿಗೆ ಲಭ್ಯವಾಗುವ 2 ಹುದ್ದೆಗಳ ವರ್ಗೀಕರಣ:**

| ಪ್ರವರ್ಗ | ಇತರೆ | ಮಹಿಳೆ | ಒಟ್ಟು |
|---|---|---|---|
| ಪ. ಜಾತಿ | 1 | – | 1 |
| ಸಾಮಾನ್ಯ ಅರ್ಹತೆ | 1 | – | 1 |
| ಒಟ್ಟು | 2 | – | 2 |

9.1.4 **ಶೈಕ್ಷಣಿಕ ವಿದ್ಯಾರ್ಹತೆ** : ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ಈ ಕೆಳಕಂಡ ವಿದ್ಯಾರ್ಹತೆಯನ್ನು ಅಭ್ಯರ್ಥಿಯು ಹೊಂದಿರಬೇಕು:–

ಅ) ಅಭ್ಯರ್ಥಿಯು ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದಲ್ಲಿ ಅರಣ್ಯಶಾಸ್ತ್ರ ವಿಷಯದಲ್ಲಿ ಪದವೀಧರರಾಗಿರಬೇಕು.

**ಅಥವಾ**

ಆ) ಅಭ್ಯರ್ಥಿಯು ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದಲ್ಲಿ:

1) ಕೃಷಿ, ಅಥವಾ

2) ತೋಟಗಾರಿಕೆ ಅಥವಾ

3) ಪಶುವಿಜ್ಞಾನ ವಿಷಯದಲ್ಲಿ ಪದವೀಧರರಾಗಿರಬೇಕು.

**ಅಥವಾ**

ಅಭ್ಯರ್ಥಿಯು ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದಲ್ಲಿ ಈ ಕೆಳಗಿನ ವಿಷಯಗಳಲ್ಲಿ ಯಾವುದಾದರು ಎರಡು ಅಥವಾ ಅದಕ್ಕಿಂತ ಹೆಚ್ಚು ವಿಷಯಗಳನ್ನು ಒಳಗೊಂಡಂತೆ ಬಿ.ಎಸ್ಸಿ., ಪದವೀಧರರಾಗಿರಬೇಕು.

**ವಿಷಯಗಳು :** ಗಣಿತಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರ, ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ, ಬಯೋ–ಕೆಮೆಸ್ಟ್ರಿ, ಮೈಕ್ರೋ–ಬಯಾಲಜಿ, ಬಯೋ–ಟೆಕ್ನಾಲಜಿ.

**ಅಥವಾ**

ಅಭ್ಯರ್ಥಿಯು ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದಲ್ಲಿ ಬ್ಯಾಚುಲರ್ ಆಫ್ ಇಂಜಿನಿಯರಿಂಗ್ ಪದವಿ ಪಡೆದಿರಬೇಕು.

**9.1.5** ಮೇಲಿನ ಪದವಿ ಪರೀಕ್ಷೆಗಳಲ್ಲಿ ನಿಗಧಿಪಡಿಸಿದ ಗರಿಷ್ಠ ಅಂಕಗಳಿಗೆ ಶೇಕಡ 50 ಕ್ಕಿಂತ ಕಡಿಮೆ ಇಲ್ಲದ ಅಂಕ ಪಡೆದು ತೇರ್ಗಡೆಯಾಗಿರಬೇಕು (ಎಲ್ಲಾ ವಾರ್ಷಿಕ/ ಸೆಮಿಸ್ಟರ್ ಪರೀಕ್ಷೆಗಳು ಕೂಡಿ) ಇಂತಹ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಲು ಅರ್ಹರು.

**9.1.6** **ವಯೋಮಿತಿ :**

ಅರ್ಜಿಯನ್ನು ಆಹ್ವಾನಿಸಿ ಜಾರಿ ಮಾಡಲಾಗಿರುವ ಈ ಅಧಿಸೂಚನೆಯ ದಿನಾಂಕಕ್ಕೆ ಅಭ್ಯರ್ಥಿಯು 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು ಮತ್ತು ಈ ಕೆಳಗಿನ ವಯೋಮಿತಿಗಳನ್ನು ಮೀರಿರಬಾರದು.

| | | |
|---|---|---|
| 1 | **ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1** | **32 ವರ್ಷ** |
| 2 | **ಪ್ರವರ್ಗ 2ಎ, 2ಬಿ, 3ಎ, 3ಬಿ** | **30 ವರ್ಷ** |
| 3 | **ಇತರರು** | **27 ವರ್ಷ** |

**9.1.7** **ಆಯ್ಕೆ ವಿಧಾನ :**

ಅ) ಪೂರ್ವಭಾವಿ ಪರೀಕ್ಷೆ – 200 ಅಂಕಗಳು

ಆ) ಮುಖ್ಯ ಪರೀಕ್ಷೆ – 200 ಅಂಕಗಳು

ಇ) **ಪೂರ್ವಭಾವಿ ಪರೀಕ್ಷೆ :** ಮೂಲ ದಾಖಲೆಗಳ ಪರಿಶೀಲನೆಯಲ್ಲಿ ಅರ್ಹತೆ ಹೊಂದಿದ ಅರ್ಹ ಅಭ್ಯರ್ಥಿಗಳಿಗೆ ಪೂರ್ವಭಾವಿ ಪರೀಕ್ಷೆ ನಡೆಸಲಾಗುವುದು. ಪೂರ್ವಭಾವಿ ಪರೀಕ್ಷೆಯ ವಿಷಯಗಳು ಮತ್ತು ಅಂಕಗಳ ವಿವರ ಈ ಕೆಳಗಿನಂತಿದೆ.

| ವಿಷಯಗಳು | ಅಂಕಗಳು |
|---|---|
| ಸಾಮಾನ್ಯ ಜ್ಞಾನ | 100 ಅಂಕಗಳು |
| ಆಪ್ಟಿಟ್ಯೂಡ್ ಪರೀಕ್ಷೆ | 100 ಅಂಕಗಳು |

ಈ) **ಮುಖ್ಯ ಪರೀಕ್ಷೆ :** ಪೂರ್ವಭಾವಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಮೆರಿಟ್ ಆಧಾರದಲ್ಲಿ ಪ್ರತಿ ಹುದ್ದೆಗೆ ಹತ್ತು ಅಭ್ಯರ್ಥಿಗಳಂತೆ (1:10 ಹುದ್ದೆ: ಅಭ್ಯರ್ಥಿ – ಪೂರ್ವಭಾವಿ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿ) ಅನುಪಾತದಲ್ಲಿ ಅಭ್ಯರ್ಥಿಗಳನ್ನು ಮುಖ್ಯ ಪರೀಕ್ಷೆಗೆ ಹಾಜರಾಗಲು ಪ್ರಚಲಿತ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಾನುಸಾರ ಆಯ್ಕೆ ಮಾಡಲಾಗುವುದು. ಮುಖ್ಯ ಪರೀಕ್ಷೆಯ ವಿಷಯಗಳ ಮತ್ತು ಅಂಕಗಳ ವಿವರ ಈ ಕೆಳಗಿನಂತಿದೆ :

1. **ಕಡ್ಡಾಯ ಪತ್ರಿಕೆಗಳು – ಭಾಷಾ ಪರೀಕ್ಷೆ (ಎಲ್ಲಾ ಅಭ್ಯರ್ಥಿಗಳಿಗೆ ಅನ್ವಯ)**–As per Syllabus

| ವಿಷಯಗಳು | | ಅಂಕಗಳು |
|---|---|---|
| 1 | ಕನ್ನಡ (ಅರ್ಹತಾ ಪರೀಕ್ಷೆ) | 100 ಅಂಕಗಳು (ಕನಿಷ್ಠ 35 ಅಂಕಗಳನ್ನು ಗಳಿಸಬೇಕು. ಈ ಅಂಕಗಳನ್ನು ಮೆರಿಟ್ ನಿಗಧಿಪಡಿಸಲು ಗಣನೆಗೆ ತೆಗೆದುಕೊಳ್ಳುವುದಿಲ್ಲ.) |
| 2 | ಇಂಗ್ಲೀಷ್ (ಅರ್ಹತಾ ಪರೀಕ್ಷೆ) | 100 ಅಂಕಗಳು (ಕನಿಷ್ಠ 35 ಅಂಕಗಳನ್ನು ಗಳಿಸಬೇಕು. ಈ ಅಂಕಗಳನ್ನು ಮೆರಿಟ್ ನಿಗಧಿಪಡಿಸಲು ಗಣನೆಗೆತೆಗೆದುಕೊಳ್ಳುವುದಿಲ್ಲ.) |

2. (ಅ) ಬಿ.ಎಸ್‌ಸಿ., ಅರಣ್ಯಶಾಸ್ತ್ರ ಪದವೀಧರರಿಗೆ **(Optional Subjects) :**

| ವಿಷಯಗಳು | | ಅಂಕಗಳು | ವಿವರ |
|---|---|---|---|
| 1 | ಅರಣ್ಯ ವಿಷಯ – ಪತ್ರಿಕೆ – 1 | 100 ಅಂಕಗಳು | As per syllabus |
| 2 | ಅರಣ್ಯ ವಿಷಯ – ಪತ್ರಿಕೆ – 2 | 100 ಅಂಕಗಳು | As per syllabus |

**ಸೂಚನೆ :** ಅರಣ್ಯ ವಿಷಯ–ಪತ್ರಿಕೆ–1 ಮತ್ತು ಅರಣ್ಯ ವಿಷಯ–ಪತ್ರಿಕೆ–2, ಈ ವಿಷಯಗಳನ್ನು ಬಿ.ಎಸ್ಸಿ., (ಅರಣ್ಯ ಶಾಸ್ತ್ರ) ಪದವೀಧರರು ಮಾತ್ರ ಆಯ್ಕೆ ಮಾಡುವಂತೆ ನಿರ್ಬಂಧಿಸಲಾಗಿದೆ.

2 (ಆ) ಐಚ್ಛಿಕ ವಿಷಯಗಳು **(Optional Subjects)** ಕ್ರಮ ಸಂಖ್ಯೆ 9.1.4(ಆ) ರಲ್ಲಿ ನಮೂದಿಸಿರುವ ಪದವೀಧರರಿಗೆ :

| ವಿಷಯಗಳು | | ಅಂಕಗಳು | ಪಠ್ಯಕ್ರಮ |
|---|---|---|---|
| | ಸಸ್ಯಶಾಸ್ತ್ರ | 100 ಅಂಕಗಳು | As per syllabus |
| | ಪ್ರಾಣಿಶಾಸ್ತ್ರ | 100 ಅಂಕಗಳು | |
| | ಗಣಿತಶಾಸ್ತ್ರ | 100 ಅಂಕಗಳು | |
| | ರಸಾಯನಶಾಸ್ತ್ರ | 100 ಅಂಕಗಳು | |
| | ಭೌತಶಾಸ್ತ್ರ | 100 ಅಂಕಗಳು | |
| | ಕೃಷಿ | 100 ಅಂಕಗಳು | |
| | ಸಿವಿಲ್ ಇಂಜಿನಿಯರಿಂಗ್ | 100 ಅಂಕಗಳು | |
| ಮೇಲೆ ಹೇಳಿದ ಐಚ್ಛಿಕ ವಿಷಯಗಳ ಪೈಕಿ ಅಭ್ಯರ್ಥಿ ಬಯಸುವ ಯಾವುದಾದರೂ ಎರಡು ಐಚ್ಛಿಕ ವಿಷಯಗಳನ್ನು ಮುಖ್ಯ ಪರೀಕ್ಷೆಗೆ ಆಯ್ಕೆ ಮಾಡಿಕೊಳ್ಳಬಹುದು. ಮುಖ್ಯ ಪರೀಕ್ಷೆಗೆ ಆಯ್ದುಕೊಂಡ ಐಚ್ಛಿಕ ವಿಷಯಗಳನ್ನು ಅರ್ಜಿಯಲ್ಲಿ ನಮೂದಿಸಬೇಕು. | | | |

**ಸೂಚನೆ :**

1. ಪೂರ್ವಭಾವಿ ಪರೀಕ್ಷೆ ಹಾಗೂ ಮುಖ್ಯ ಪರೀಕ್ಷೆ ನಡೆಸುವ ದಿನಾಂಕ ಹಾಗೂ ಸ್ಥಳವನ್ನು ನಿಗಮದ ವೆಬ್‌ಸೈಟಿನಲ್ಲಿ ಪ್ರಕಟಿಸಲಾಗುವುದು.
2. ಅಭ್ಯರ್ಥಿಗಳು ಆಯ್ಕೆ ಮಾಡಿಕೊಂಡಿರುವ ಎಲ್ಲಾ ಪರೀಕ್ಷೆಗಳಿಗೆ ಕಡ್ಡಾಯವಾಗಿ ಹಾಜರಾಗಬೇಕು. ಯಾವುದೇ ಒಂದು ಪರೀಕ್ಷೆಗೆ ಗೈರುಹಾಜರಾದರೂ ಸಹ ಉಳಿದ ಪತ್ರಿಕೆಗಳಲ್ಲಿ ಪಡೆದ ಅಂಕಗಳನ್ನು ಪ್ರಕಟಿಸಲಾಗುವುದಿಲ್ಲ ಹಾಗೂ ಉಳಿದ ಪತ್ರಿಕೆಗಳಲ್ಲಿ ಎಷ್ಟು ಅಂಕಗಳನ್ನು ಗಳಿಸಿದರೂ ಸಹ ಇಂತಹ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಗೆ ಪರಿಗಣಿಸಲಾಗುವುದಿಲ್ಲ. ಅಭ್ಯರ್ಥಿಗಳು ಉತ್ತರ ಪತ್ರಿಕೆಯಲ್ಲಿ ಪ್ರಶ್ನೆ ಪತ್ರಿಕೆಯ ಸಂಖ್ಯೆ ಅಥವಾ ಕೋಡ್ ಬರೆಯದಿದ್ದಲ್ಲಿ ಅಂತಹ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.
3. ಅಭ್ಯರ್ಥಿಗಳ ಉತ್ತರ ಪತ್ರಿಕೆಗಳನ್ನು ಯಾವುದೇ ಕಾರಣಕ್ಕೂ ಮರುಮೌಲ್ಯಮಾಪನ ಮಾಡಲಾಗುವುದಿಲ್ಲ.

4. ಕಡ್ಡಾಯ ಪತ್ರಿಕೆಗಳಾದ ಕನ್ನಡ ಮತ್ತು ಆಂಗ್ಲ ಭಾಷಾ ಪರೀಕ್ಷೆಗಳಲ್ಲಿ ಅನುತ್ತೀರ್ಣರಾಗುವ ಅಭ್ಯರ್ಥಿಗಳು ಉಳಿದ ಪತ್ರಿಕೆಗಳಲ್ಲಿ ಪಡೆದ ಅಂಕಗಳನ್ನು ಪ್ರಕಟಿಸಲಾಗುವುದಿಲ್ಲ.

5. ಭಾಷಾ ವಿಷಯಗಳ ಪ್ರಶ್ನೆ ಪತ್ರಿಕೆಯನ್ನು ಹೊರತುಪಡಿಸಿ ಉಳಿದಂತೆ ಎಲ್ಲಾ ವಿಷಯಗಳ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಇರುತ್ತವೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಇಂಗ್ಲೀಷ್ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು. ಅಭ್ಯರ್ಥಿಯು ತನ್ನ ಪ್ರಶ್ನೆ ಪತ್ರಿಕೆಗಳನ್ನು ಸಂಪೂರ್ಣವಾಗಿ ಕನ್ನಡ ಅಥವಾ ಇಂಗ್ಲೀಷ್ ಮಾಧ್ಯಮದಲ್ಲಿ ಉತ್ತರಿಸತಕ್ಕದ್ದು. **ಅರ್ಧ ಕನ್ನಡ ಅಥವಾ ಅರ್ಧ ಇಂಗ್ಲೀಷ್ ಮಾಧ್ಯಮದಲ್ಲಿ ಉತ್ತರಿಸಿದಲ್ಲಿ ಅಂತಹ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನಗೊಳಿಸುವುದಿಲ್ಲ ಮತ್ತು ಅಂತಹವರ ಅಭ್ಯರ್ಥಿತನವನ್ನು ರದ್ದುಗೊಳಿಸಲಾಗುವುದು.**

6. ಪರೀಕ್ಷಾ ಪ್ರಶ್ನೆ ಪತ್ರಿಕೆಯನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವುದು. ಅಭ್ಯರ್ಥಿಗಳು ಯಾವ ಮಾಧ್ಯಮದಲ್ಲಿ ಪ್ರಶ್ನೆ ಪತ್ರಿಕೆಗೆ ಉತ್ತರಿಸುತ್ತಾರೆಂಬುದನ್ನು ಅರ್ಜಿ ನಮೂನೆಯಲ್ಲಿ ಕಡ್ಡಾಯವಾಗಿ ನಮೂದಿಸಬೇಕು. ಒಮ್ಮೆ ಆಯ್ಕೆ ಮಾಡಿಕೊಂಡ ಮಾಧ್ಯಮವನ್ನು ಯಾವುದೇ ಕಾರಣಕ್ಕೆ ಬದಲಾಯಿಸಿಕೊಳ್ಳಲು ಅವಕಾಶವಿರುವುದಿಲ್ಲ.

7. ಪೂರ್ವಭಾವಿ ಪರೀಕ್ಷೆಗಳಾದ ಸಾಮಾನ್ಯ ಜ್ಞಾನ ಹಾಗೂ ಆಪ್ಟಿಟ್ಯೂಡ್ ಪರೀಕ್ಷೆಗಳಲ್ಲಿ ಪಡೆದ ಅಂಕಗಳು ಮತ್ತು ಮುಖ್ಯ ಪರೀಕ್ಷೆಯ ಐಚ್ಛಿಕ ವಿಷಯಗಳಲ್ಲಿ ಅಭ್ಯರ್ಥಿಯು ಗಳಿಸಿದ ಒಟ್ಟು ಅಂಕಗಳ ಮೆರಿಟ್ ಆಧಾರದ ಮೇಲೆ ಬಿ.ಎಸ್ಸಿ., (ಅರಣ್ಯಶಾಸ್ತ್ರ) ಪದವೀಧರ ಮತ್ತು ವಿಜ್ಞಾನ/ ಇಂಜಿನಿಯರಿಂಗ್ ಪದವೀಧರ ಅಭ್ಯರ್ಥಿಗಳನ್ನು ಪ್ರಚಲಿತ ಮೀಸಲಾತಿ ನಿಯಮಾನುಸಾರ 1:2 (ಹುದ್ದೆ:ಅಭ್ಯರ್ಥಿ) ಅನುಪಾತದಲ್ಲಿ ಆಯ್ಕೆ ಮಾಡಿ ಪಟ್ಟಿಯನ್ನು ತಯಾರಿಸಲಾಗುವುದು. ಒಂದು ವೇಳೆ ಒಂದಕ್ಕಿಂತ ಹೆಚ್ಚು ಅಭ್ಯರ್ಥಿಗಳು ಸಮಾನವಾದ ಅಂಕಗಳನ್ನು ಗಳಿಸಿದ ಸಂದರ್ಭದಲ್ಲಿ ವಯಸ್ಸಿನ ಆಧಾರದ ಮೇಲೆ ಅಂದರೆ ವಯಸ್ಸಿನಲ್ಲಿ ಹಿರಿಯರಾದ ಅಭ್ಯರ್ಥಿಗಳನ್ನು ಮೆರಿಟ್‌ನಲ್ಲಿ ಮೇಲೆ ತರಲಾಗುವುದು.

9.1.8 ಈ ರೀತಿ ಆಯ್ಕೆ ಮಾಡಿದ ಅಭ್ಯರ್ಥಿಗಳು ನಿಗಮದಲ್ಲಿ ನಡೆಸುವ ದೇಹದಾರ್ಢ್ಯತೆ, ವೈದ್ಯಕೀಯ ಪರೀಕ್ಷೆ ಹಾಗೂ ದೈಹಿಕ ತಾಳ್ವಿಕೆ ಪರೀಕ್ಷೆಗಳಿಗೆ ಹಾಜರಾಗಬೇಕು.

9.1.9 **ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆ :**

ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಯನ್ನು ಜಿಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ Civil Surgeon/ Chief Medical Officer/ Medical Superintendent ರವರ ದರ್ಜೆಗಿಂತ ಕಡಿಮೆ ಇರದ ವೈದ್ಯಾಧಿಕಾರಿಗಳಿಂದ ಈ ಕೆಳಕಂಡ ಮಾನದಂಡಗಳಂತೆ ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳನ್ನು ನಿಗಮದ ಮುಖಾಂತರ ನಡೆಸಲಾಗುವುದು. ಸೂಚಿತ ದಿನಾಂಕದಂದು ನಡೆಸುವ ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳಿಗೆ ಗೈರುಹಾಜರಾಗುವ ಅಭ್ಯರ್ಥಿಗಳಿಗೆ ಯಾವುದೇ ಕಾರಣಕ್ಕೂ ಯಾವುದೇ ಸಂದರ್ಭದಲ್ಲಿಯೂ ಎರಡನೇ ಬಾರಿ ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳನ್ನು ನಡೆಸಲು ಅವಕಾಶ ನೀಡಲಾಗುವುದಿಲ್ಲ. ಗೈರುಹಾಜರಾಗುವ ಅಭ್ಯರ್ಥಿಗಳನ್ನು ಅನರ್ಹ ಅಭ್ಯರ್ಥಿಗಳೆಂದು ಪರಿಗಣಿಸಲಾಗುವುದು. ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳಲ್ಲಿ ಅನರ್ಹಗೊಂಡ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳು ಈ ಕೆಳಕಂಡಂತಿರುತ್ತದೆ.

9.1.10 **ದೇಹದಾರ್ಢ್ಯತೆ ಪರೀಕ್ಷೆ :**

**ಶಾರೀರಿಕ ಮಾನದಂಡ: ಅಭ್ಯರ್ಥಿಗಳು ಈ ಕೆಳಗಿನ ಕನಿಷ್ಠ ಶಾರೀರಿಕ ಮಾನದಂಡ ಹೊಂದಿರಬೇಕು.**

| **ಪುರುಷ ಅಭ್ಯರ್ಥಿಗಳಿಗೆ** | | |
|---|---|---|
| 1 | ಎತ್ತರ | ಕನಿಷ್ಠ 163 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 79 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |
| **ಮಹಿಳಾ ಅಭ್ಯರ್ಥಿಗಳಿಗೆ** | | |
| 1 | ಎತ್ತರ | ಕನಿಷ್ಠ 150 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 74 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |

9.1.11 **ವೈದ್ಯಕೀಯ ಪರೀಕ್ಷೆ :**

**ದೃಷ್ಟಿ ಸಾಮರ್ಥ್ಯ :**

ಅಭ್ಯರ್ಥಿಗಳು ಈ ಕೆಳಗೆ ನಿಗಧಿಪಡಿಸಿರುವ ಅಂತರದ ದೃಷ್ಟಿ ಸಾಮರ್ಥ್ಯವನ್ನು ಕನ್ನಡಕ ಸಹಿತ ಅಥವಾ ಕನ್ನಡಕ ರಹಿತ ಕಡ್ಡಾಯವಾಗಿ ಹೊಂದಿರಬೇಕು

| **ದೂರ ದೃಷ್ಟಿ (Distant vision)** | | | **ಸಮೀಪ ದೃಷ್ಟಿ (Near vision)** | | |
|---|---|---|---|---|---|
| ದೋಷರಹಿತ ಕಣ್ಣು (Better eye) | ಅಥವಾ | ದೋಷಪೂರಿತ ಕಣ್ಣು (Worse eye) | ದೋಷರಹಿತ ಕಣ್ಣು (Better eye) | ಅಥವಾ | ದೋಷಪೂರಿತ ಕಣ್ಣು (Worse eye) |
| 6/6 ಮೀಟರ್ | | 6/9 ಮೀಟರ್ | 0/6 ಮೀಟರ್ | | 0/8 ಮೀಟರ್ |

ಪ್ರತಿಯೊಂದು ಕಣ್ಣು ಪೂರ್ಣ ದೃಶ್ಯವನ್ನು ನೋಡುವ ಸಾಮರ್ಥವನ್ನು ಹೊಂದಿರಬೇಕು. ಬಣ್ಣಕುರುಡು, ಮೆಳ್ಳೆಗಣ್ಣು ಅಥವಾ ಯಾವುದೇ ರೀತಿಯ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.

9.1.12 **ಶ್ರವಣಶಕ್ತಿ**

ಅಭ್ಯರ್ಥಿಗಳ ಶ್ರವಣ ಶಕ್ತಿಯನ್ನು ಪರೀಕ್ಷಿಸಲು ಈ ಕೆಳಕಂಡ ವೈದ್ಯಕೀಯ ಪರೀಕ್ಷೆಗಳನ್ನು ನಡೆಸಲಾಗುವುದು.

1. ರಿನ್ನರ್ಸ್ ಟೆಸ್ಟ್
2. ವೆಬ್ಬರ್ಸ್ ಟೆಸ್ಟ್
3. ಟೆಸ್ಟ್ ಫಾರ್ ವರ್ಟಿಗೋ

ಮೇಲಿನ ಪರೀಕ್ಷೆಗಳಲ್ಲಿ ಯಾವುದಾದರೂ ಶ್ರವಣ ದೋಷವಿದೆಯೆಂದು ಸಾಬೀತಾದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಗೆ ಅರ್ಹರಲ್ಲ.

9.1.13 **ಕೆಳಕಂಡ ಅಂಗವಿಕಲತೆಯಿರುವವರು ಆಯ್ಕೆಗೆ ಅರ್ಹರಲ್ಲ :**

1. ತೊಡರುಗಾಲು (Knock knees)
2. ಬಾಗಿದ ಕಾಲುಗಳು (Bow legs)
3. ಸಮತಟ್ಟಾದ ಪಾದ (Flat feet)
4. ನರ ಊತವಿರುವವರು (Varicose Veins)

ದೇಹದಾರ್ಢ್ಯತೆ ಮತ್ತು ವೈದ್ಯಕೀಯ ಪರೀಕ್ಷೆಗಳಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ಮುಂದಿನ ಹಂತದ ದೈಹಿಕ ತಾಳ್ವಿಕೆ ಪರೀಕ್ಷೆಗೆ ಹಾಜರಾಗಲು ಅರ್ಹತೆ ಪಡೆಯುತ್ತಾರೆ.

9.1.14 **ದೈಹಿಕ ತಾಳ್ವಿಕೆ ಪರೀಕ್ಷೆ :**

| | | |
|---|---|---|
| ಪುರುಷ ಅಭ್ಯರ್ಥಿಗಳಿಗೆ | : | 25 ಕಿ.ಮೀ. ಕಾಲು ನಡಿಗೆ ಗರಿಷ್ಠ 4 ಗಂಟೆಗಳ ಅವಧಿಯಲ್ಲಿ ಪೂರೈಸಬೇಕು |
| ಮಹಿಳಾ ಅಭ್ಯರ್ಥಿಗಳಿಗೆ | : | 16 ಕಿ.ಮೀ. ಕಾಲು ನಡಿಗೆ ಗರಿಷ್ಠ 4 ಗಂಟೆಗಳ ಅವಧಿಯಲ್ಲಿ ಪೂರೈಸಬೇಕು |

ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. ಯಾವುದೇ ಸಂದರ್ಭದಲ್ಲಿ ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳಿಗೆ ಎರಡನೇ ಬಾರಿ ದೈಹಿಕ ತಾಳ್ವಿಕೆ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ.

**ವಿಶೇಷ ಸೂಚನೆ:– ಅಭ್ಯರ್ಥಿಗಳು ನೇಮಕಾತಿ ಪರೀಕ್ಷೆಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.**

9.1.15 ದೇಹದಾರ್ಢ್ಯತೆ ಪರೀಕ್ಷೆ, ವೈದ್ಯಕೀಯ ಪರೀಕ್ಷೆ ಹಾಗೂ ದೈಹಿಕ ತಾಳ್ವಿಕೆ ಪರೀಕ್ಷೆಗಳನ್ನು ಯಶಸ್ವಿಯಾಗಿ ಪೂರೈಸಿದ ಅಭ್ಯರ್ಥಿಗಳ ಪೈಕಿ ಪೂರ್ವಭಾವಿ ಮತ್ತು ಮುಖ್ಯ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಅಂಕಗಳ ಮೆರಿಟ್ ಆಧಾರದ ಮೇಲೆ ಮತ್ತು ಪ್ರಚಲಿತ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಾನುಸಾರ ನೇರ ನೇಮಕಾತಿಗಾಗಿ ಹೊರಡಿಸಲಾದ ಅಧಿಸೂಚನೆಯಲ್ಲಿ ಸೂಚಿಸಿರುವ ಖಾಲಿ ಹುದ್ದೆಗಳಿಗೆ ಸಮನಾದ ಸಂಖ್ಯೆಯಲ್ಲಿ ಅಭ್ಯರ್ಥಿಗಳನ್ನು ನೆಡುತೋಪು ಅಧೀಕ್ಷಕರ ಹುದ್ದೆಗೆ ಆಯ್ಕೆ ಮಾಡಲಾಗುವುದು.

9.1.16 ಆಯ್ಕೆಯಾದ ಅಭ್ಯರ್ಥಿಗಳನ್ನು ನಿಗಮದ ಯಾವುದೇ ವಿಭಾಗದಲ್ಲಿ ₹. 21600–600–24600–700–28800–800–33600–900–39000–1050–40050ರ ವೇತನ ಶ್ರೇಣಿಯಲ್ಲಿ ಮೂರು ವರ್ಷಗಳ ಪರೀಕ್ಷಾರ್ಥ ಅವಧಿಯಲ್ಲಿ ನೆಡುತೋಪು ಅಧೀಕ್ಷಕರಾಗಿ ನೇಮಕಾತಿ ಪ್ರಾಧಿಕಾರದಿಂದ ನೇಮಕ ಮಾಡಲಾಗುವುದು ಮತ್ತು ಅವರನ್ನು ಭಾರತ ಸರ್ಕಾರದ ನಿಯಂತ್ರಣದಲ್ಲಿರುವ ಯಾವುದಾದರೂ ವಲಯ ಅರಣ್ಯಾಧಿಕಾರಿ ಹುದ್ದೆಯ ತರಬೇತಿ ಶಾಲೆಯಲ್ಲಿ ತರಬೇತಿಗಾಗಿ ನಿಯೋಜಿಸಲಾಗುವುದು. ತರಬೇತಿಯು 18 ತಿಂಗಳ ಅವಧಿಯದ್ದಾಗಿದೆ. ತರಬೇತಿ ಶಾಲೆಗಳಲ್ಲಿ ಪ್ರವೇಶ ದೊರಕುವುದು ವಿಳಂಬವಾದಲ್ಲಿ ನಿಗಮವು ತನ್ನ ವತಿಯಿಂದ ಅಭ್ಯರ್ಥಿಗಳಿಗೆ ಅಭಿಶಿಕ್ಷಣವನ್ನು (Orientation Course) ನೀಡಿ, ನಿಗಮದ ಯಾವುದೇ ವಿಭಾಗದಲ್ಲಿ ಕೆಲಸಕ್ಕೆ ನೇಮಿಸಲಾಗುವುದು. ತರಬೇತಿ ಶಾಲೆಗಳಲ್ಲಿ ಪ್ರವೇಶ ದೊರಕಿದಾಗ ಈ ಅಭ್ಯರ್ಥಿಗಳನ್ನು ತರಬೇತಿಗಾಗಿ ಕಳುಹಿಸಲಾಗುವುದು.

9.1.17 ನೆಡುತೋಪು ಅಧೀಕ್ಷಕರಾಗಿ ನೇಮಕಗೊಂಡ ನಂತರ ಸದರಿ ಅಭ್ಯರ್ಥಿಯು ತರಬೇತಿಗೆ ಹಾಜರಾಗುವ ಮೊದಲು ನೇಮಕಾತಿ ಪ್ರಾಧಿಕಾರದ ಸಮಕ್ಷಮ ರೂಪಾಯಿ 1,00,000.00 ಸಾಲ್ವೆಂಟ್ ಶೂರಿಟಿ ಹೊಂದಿರುವ ಇಬ್ಬರು ಅಥವಾ ₹. 14,550/– ಗಿಂತ ಹೆಚ್ಚು ಮಾಸಿಕ ವೇತನ ಪಡೆಯುತ್ತಿರುವ ಮತ್ತು ತರಬೇತಿ ಮುಗಿಯುವ ದಿನಾಂಕದಿಂದ ಕನಿಷ್ಠ 6 ವರ್ಷ ಸೇವಾವಧಿ ಉಳಿದಿರುವ ಇಬ್ಬರು ಸರ್ಕಾರಿ ನೌಕರರ ಜಾಮೀನು ಕೊಡಬೇಕು. ಇದು ಸಾಧ್ಯವಾಗದಿದ್ದ ಪಕ್ಷದಲ್ಲಿ ಅಭ್ಯರ್ಥಿಯು ₹. 1,00,000/– ಮೊತ್ತದ ರಾಷ್ಟ್ರೀಯ ಉಳಿತಾಯ ಸರ್ಟಿಫೀಕೇಟನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ಹೆಸರಿಗೆ ಅಡವು ಇರಿಸಬಹುದು. ಅಭ್ಯರ್ಥಿಯು ನಿಗಮದಲ್ಲಿ ನೇಮಕಾತಿಯಾದ ದಿನಾಂಕದಿಂದ ಕನಿಷ್ಠ 5 ವರ್ಷ ಸೇವೆ ಸಲ್ಲಿಸುವುದಾಗಿ, ತಪ್ಪಿದಲ್ಲಿ ನಿಗಮವು ತರಬೇತಿಯ ಬಗ್ಗೆ ಭರಿಸಿದ ಸಂಪೂರ್ಣ ವೆಚ್ಚವನ್ನು ಮತ್ತು ತರಬೇತಿ ಅವಧಿಯಲ್ಲಿ ಪಡೆದ ವೇತನವನ್ನು ಶೇಕಡ 8 ರ ದಂಡನೆ ಬಡ್ಡಿಯೊಂದಿಗೆ ನಿಗಮಕ್ಕೆ ಪಾವತಿ ಮಾಡಲು ಮತ್ತು ಆಯ್ಕೆ ಪ್ರಾಧಿಕಾರ ನಿಗಧಿಪಡಿಸುವ ಇತರೆ ಷರತ್ತುಗಳನ್ನು ಪೂರೈಸಲು ಸಿದ್ಧವಿರುವುದಾಗಿ ಛಾಪಾ ಕಾಗದದಲ್ಲಿ ನಿಗಧಿತ ನಮೂನೆಯಲ್ಲಿ ಅಭ್ಯರ್ಥಿಯು ಕರಾರು ಪತ್ರವನ್ನು ಬರೆದು ಕೊಡತಕ್ಕದ್ದು.

9.1.18 ಒಂದು ವೇಳೆ ಅಭ್ಯರ್ಥಿಯು ಸೂಕ್ತ ಕಾರಣಗಳನ್ನು ಹೊರತುಪಡಿಸಿ (ಕಾರಣದ ಸೂಕ್ತತೆ ಬಗ್ಗೆ ನಿಗಮದ ನಿರ್ಣಯವೇ ಅಂತಿಮವಾಗುತ್ತದೆ) ಷರತ್ತುಗಳನ್ನು ಪೂರೈಸಲು ವಿಫಲವಾದಲ್ಲಿ ಅಥವಾ ತರಬೇತಿಯನ್ನು ಪೂರೈಸಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ವಿಫಲರಾದಲ್ಲಿ ಅಥವಾ ಯಾವುದೇ ಕಾರಣಕ್ಕಾಗಿ ತರಬೇತಿಯಿಂದ ತೆಗೆದು ಹಾಕಲ್ಪಟ್ಟರೆ ಅಥವಾ ಸ್ವಇಚ್ಛೆಯಿಂದ ತರಬೇತಿ ಮಧ್ಯದಲ್ಲಿ ಬಿಟ್ಟುಬಿಟ್ಟರೆ ಅಥವಾ ಪರೀಕ್ಷಾರ್ಥ

ಅವಧಿಯನ್ನು ಯಶಸ್ವಿಯಾಗಿ ಪೂರೈಸದಿದ್ದರೆ ನಿಗಮವು ಅಭ್ಯರ್ಥಿಯ ತರಬೇತಿಗಾಗಿ ಭರಿಸಿದ ವೆಚ್ಚವನ್ನು ಮತ್ತು ತರಬೇತಿ ಅವಧಿಯಲ್ಲಿ ಪಡೆದ ವೇತನವನ್ನು ಮೇಲೆ ನಿಗಧಿಪಡಿಸಿದ ದರದಲ್ಲಿ ಬಡ್ಡಿಯೊಂದಿಗೆ ಮರು ಪಾವತಿಸಲು ಅಭ್ಯರ್ಥಿ ಮತ್ತು ಜಾಮೀನುದಾರರು ಒಟ್ಟಾಗಿಯೂ ಮತ್ತು ಪ್ರತ್ಯೇಕವಾಗಿಯೂ ಭರಿಸಲು ಬದ್ಧರಾಗಿರತಕ್ಕದ್ದು. ಅಂತಹ ಹಣವನ್ನು ಇವರೆಲ್ಲರಿಂದ ಒಟ್ಟಾರೆಯಾಗಿ ಅಥವಾ ಪ್ರತಿಯೊಬ್ಬರಿಂದ ಪ್ರತ್ಯೇಕವಾಗಿ ವಸೂಲು ಮಾಡುವ ಹಕ್ಕನ್ನು ನಿಗಮವು ಹೊಂದಿರುತ್ತದೆ.

9.1.19 ಅಭ್ಯರ್ಥಿಗಳ ತರಬೇತಿಯ ಸಂಪೂರ್ಣ ವೆಚ್ಚವನ್ನು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ ಭರಿಸುವುದು. ಆದರೆ ಸಾಧನ ಸಾಮಗ್ರಿಗಳ ₹. 50,000.00 ದ ಶೇಕಡ 50 ಅಂದರೆ ₹. 25,000.00 ನ್ನು ಅಭ್ಯರ್ಥಿಗಳು ತರಬೇತಿ ಪೂರ್ಣಗೊಳಿಸಿ ಬಂದ ನಂತರ ನಿಗಮದಲ್ಲಿ ನಿಯುಕ್ತಿಗೊಂಡ ದಿನಾಂಕದಿಂದ ಪಡೆಯುವ ವೇತನದಿಂದ ಆರಂಭಗೊಂಡು ಒಟ್ಟು 10 ಸಮಾನ ಮಾಸಿಕ ಕಂತುಗಳಲ್ಲಿ ವಸೂಲು ಮಾಡಲಾಗುವುದು. ಮೇಲಿನ ಸಾಧನ ಸಾಮಗ್ರಿ ಭತ್ಯೆಯು ತಾತ್ಕಾಲಿಕವಾಗಿದ್ದು ಪರಿಷ್ಕರಿಸಬಹುದು.

9.1.20 ತರಬೇತಿಯನ್ನು ಯಶಸ್ವಿಯಾಗಿ ಪೂರೈಸಿದ ನಂತರ ಇವರುಗಳನ್ನು 6 ತಿಂಗಳ ಅವಧಿಗೆ ವೃತ್ತಿ ತರಬೇತಿಗಾಗಿ ನಿಯೋಜಿಸಲಾಗುವುದು. ಉಳಿದ 1 ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಇವರುಗಳು ನೆಡುತೋಪು ಅಧೀಕ್ಷಕರಾಗಿ ಸ್ವತಂತ್ರವಾಗಿ ಕೆಲಸ ನಿರ್ವಹಿಸತಕ್ಕದ್ದು.

9.1.21 ತರಬೇತಿ ಸಮಯದಲ್ಲಿ ಅಭ್ಯರ್ಥಿಗಳು ನೆಡುತೋಪು ಅಧೀಕ್ಷಕರ ಹುದ್ದೆಯ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ.

9.**2** **ಸಹಾಯಕ ನೆಡುತೋಪು ಅಧೀಕ್ಷಕರು – 30 ಹುದ್ದೆಗಳು :**

ರಬ್ಬರ್ ವಿಭಾಗ – 18 ಹುದ್ದೆಗಳು

ಪಲ್ಪ್‌ವುಡ್ ವಿಭಾಗ – 12 ಹುದ್ದೆಗಳು

9.2.**1**

| | ರಬ್ಬರ್ ವಿಭಾಗ | ಪಲ್ಪ್‌ವುಡ್ ವಿಭಾಗ |
|---|---|---|
| ಅ) ಬಿ.ಎಸ್ಸಿ., (ಅರಣ್ಯ ಶಾಸ್ತ್ರ) ಪದವೀಧರರು – | 9 ಹುದ್ದೆಗಳು | 6 ಹುದ್ದೆಗಳು |
| ಆ) ಬಿ.ಎಸ್ಸಿ., (ಇತರೆ) ಪದವೀಧರರು – | 9 ಹುದ್ದೆಗಳು | 6 ಹುದ್ದೆಗಳು |

9.2.2 **ವೇತನ ಶ್ರೇಣಿ :** ₹. 12500–250–13000–300–14200–350–15600–400–17200–450–19000–500–21000–600–24000.

9.2.3 **ಮೀಸಲಾತಿ :**

**ಅ) ರಬ್ಬರ್ ವಿಭಾಗ: ಬಿ.ಎಸ್ಸಿ., (ಅರಣ್ಯ ಶಾಸ್ತ್ರ) ಪದವೀಧರರಿಗೆ ಲಭ್ಯವಾಗುವ 9 ಹುದ್ದೆಗಳ ವರ್ಗೀಕರಣ :**

| ಪ್ರವರ್ಗ | ಇತರೆ | ಗ್ರಾಮೀಣ | ಕುಷ್ಠ ರೋಗದಿಂದ ಗುಣಮುಖ ಹೊಂದಿದ ಅಭ್ಯರ್ಥಿ | ಒಟ್ಟು |
|---|---|---|---|---|
| ಪ. ಜಾತಿ | 2 | – | – | 2 |
| ಪ. ಪಂಗಡ | 1 | – | – | 1 |
| ಸಾಮಾನ್ಯ ಅರ್ಹತೆ | 2 | 1 | 1 | 4 |
| ಪ್ರವರ್ಗ–I | 1 | – | – | 1 |
| ಪ್ರವರ್ಗ– II(ಎ) | 1 | – | – | 1 |
| ಒಟ್ಟು | 7 | 1 | 1 | 9 |

**ಆ) ರಬ್ಬರ್ ವಿಭಾಗ: ಬಿ.ಎಸ್ಸಿ., (ಇತರೆ) ಪದವೀಧರರಿಗೆ ಲಭ್ಯವಾಗುವ 9 ಹುದ್ದೆಗಳ ವರ್ಗೀಕರಣ :**

| ಪ್ರವರ್ಗ | ಇತರೆ | ಗ್ರಾಮೀಣ | ಕುಷ್ಠ ರೋಗದಿಂದ ಗುಣಮುಖ ಹೊಂದಿದ ಅಭ್ಯರ್ಥಿ | ಒಟ್ಟು |
|---|---|---|---|---|
| ಪ. ಜಾತಿ | 2 | – | – | 2 |
| ಪ. ಪಂಗಡ | 1 | – | – | 1 |
| ಸಾಮಾನ್ಯ ಅರ್ಹತೆ | 2 | 1 | 1 | 4 |
| ಪ್ರವರ್ಗ– I | 1 | – | – | 1 |
| ಪ್ರವರ್ಗ– II(ಎ) | 1 | – | – | 1 |
| ಒಟ್ಟು | 7 | 1 | 1 | 9 |

**ಇ) ಪಲ್ಪ್‌ವುಡ್ ವಿಭಾಗ: ಬಿ.ಎಸ್ಸಿ., (ಅರಣ್ಯ ಶಾಸ್ತ್ರ) ಪದವೀಧರರಿಗೆ ಲಭ್ಯವಾಗುವ 6 ಹುದ್ದೆಗಳ ವರ್ಗೀಕರಣ :**

| ಪ್ರವರ್ಗ | ಇತರೆ | ಗ್ರಾಮೀಣ | ಒಟ್ಟು |
|---|---|---|---|
| ಪ. ಜಾತಿ | 1 | – | 1 |
| ಪ. ಪಂಗಡ | 1 | – | 1 |
| ಸಾಮಾನ್ಯ ಅರ್ಹತೆ | 2 | 1 | 3 |

| ಪ್ರವರ್ಗ | ಇತರೆ | ಗ್ರಾಮೀಣ | ಒಟ್ಟು |
|---|---|---|---|
| ಪ್ರವರ್ಗ– I | 1 | – | 1 |
| ಒಟ್ಟು | 5 | 1 | 6 |

**ಈ) ಪಲ್ಪ್‌ವುಡ್ ವಿಭಾಗ : ಬಿ.ಎಸ್ಸಿ., (ಇತರೆ) ಪದವೀಧರರಿಗೆ ಲಭ್ಯವಾಗುವ 6 ಹುದ್ದೆಗಳ ವರ್ಗೀಕರಣ :**

| ಪ್ರವರ್ಗ | ಇತರೆ | ಗ್ರಾಮೀಣ | ಒಟ್ಟು |
|---|---|---|---|
| ಪ. ಜಾತಿ | 1 | – | 1 |
| ಪ. ಪಂಗಡ | 1 | – | 1 |
| ಸಾಮಾನ್ಯ ಅರ್ಹತೆ | 2 | 1 | 3 |
| ಪ್ರವರ್ಗ– I | 1 | – | 1 |
| ಒಟ್ಟು | 5 | 1 | 6 |

9.2.4 **ಅರ್ಹತೆ ಮತ್ತು ನಿಬಂಧನೆಗಳು :**

ಅ) **ವಿದ್ಯಾರ್ಹತೆ :**

ಅಧಿಸೂಚನೆಯ ದಿನಾಂಕಕ್ಕೆ ಈ ಕೆಳಕಂಡ ವಿದ್ಯಾರ್ಹತೆಯನ್ನು ಅಭ್ಯರ್ಥಿಯು ಹೊಂದಿರಬೇಕು.

ಅಭ್ಯರ್ಥಿಯು ಸರ್ಕಾರದಿಂದ ಮಾನ್ಯತೆ ಪಡೆದ ವಿಶ್ವವಿದ್ಯಾನಿಲಯದಲ್ಲಿ ಬಿ.ಎಸ್ಸಿ., (ಫಾರೆಸ್ಟ್ರಿ) ವಿಷಯದಲ್ಲಿ ಅಥವಾ ಬಿ.ಎಸ್ಸಿ.,ಯಲ್ಲಿ ಕೃಷಿ/ ತೋಟಗಾರಿಕೆ/ ಪಶುವೈದ್ಯ/ ಇತರೆ ಪದವೀಧರರಾಗಿಬೇಕು. ಬಿ.ಎಸ್ಸಿ., ಪದವೀಧರರು ಭೌತಶಾಸ್ತ್ರ (Physics), ರಸಾಯನಶಾಸ್ತ್ರ (Chemistry), ಗಣಿತಶಾಸ್ತ್ರ (Mathematics), ಸಸ್ಯಶಾಸ್ತ್ರ (Botany), ಪ್ರಾಣಿಶಾಸ್ತ್ರ (Zoology), ಭೂಗರ್ಭ ಶಾಸ್ತ್ರ (Geology), Micro Biology, Bio-Technology, Bio-Chemistry - ಈ ಐಚ್ಛಿಕ ಪಠ್ಯಕ್ರಮಗಳಲ್ಲಿ ಯಾವುದಾದರೂ ಎರಡು ಅಥವಾ ಹೆಚ್ಚಿನ ಪಠ್ಯಕ್ರಮಗಳನ್ನು ಎಲ್ಲಾ ಸೆಮಿಸ್ಟರುಗಳಲ್ಲಿ ಅಭ್ಯಾಸ ಮಾಡಿರಬೇಕು.

ಆ) **ವಯೋಮಿತಿ :**

ಅಧಿಸೂಚನೆ ದಿನಾಂಕಕ್ಕೆ ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು. ಅಧಿಸೂಚನೆಯ ದಿನಾಂಕಕ್ಕೆ ಗರಿಷ್ಠ ವಯೋಮಿತಿ ವಿವರಗಳು ಕೆಳಗಿನಂತಿದೆ.

| | |
|---|---|
| **ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ ಮತ್ತು ಪ್ರವರ್ಗ–1** | **ಗರಿಷ್ಠ ವಯೋಮಿತಿ 30 ವರ್ಷಗಳು** |
| **ಪ್ರವರ್ಗ 2ಎ, 2ಬಿ, 3ಎ, 3ಬಿ** | **ಗರಿಷ್ಠ ವಯೋಮಿತಿ 28 ವರ್ಷಗಳು** |
| **ಸಾಮಾನ್ಯ ಅರ್ಹತೆ** | **ಗರಿಷ್ಠ ವಯೋಮಿತಿ 25 ವರ್ಷಗಳು** |

9.2.5 **ಸ್ವೀಕೃತ ಅರ್ಜಿಗಳ ಪರಾಮರ್ಶೆ/ ನೇಮಕಾತಿ ವಿಧಾನ :**

ನಿಗಮದಲ್ಲಿ ಖಾಲಿ ಇರುವ ಒಟ್ಟು ಹುದ್ದೆಗಳನ್ನು ಪರಿಗಣನೆಗೆ ತೆಗೆದುಕೊಂಡು ಹಾಗೂ ಪ್ರಸ್ತುತ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಾನುಸಾರ ಸಹಾಯಕ ನೆಡುತೋಪು ಅಧೀಕ್ಷಕರ ಹುದ್ದೆಗೆ ಮೀಸಲಾತಿ ವರ್ಗೀಕರಣ ಮಾಡಲಾಗಿದೆ. ಈ ಹುದ್ದೆಗೆ ಸ್ವೀಕರಿಸಲಾಗುವ ಎಲ್ಲಾ ಅರ್ಹ ಅರ್ಜಿಗಳನ್ನು ರಾಜ್ಯಮಟ್ಟದಲ್ಲಿ ಬಿ.ಎಸ್ಸಿ., (ಫಾರೆಸ್ಟ್ರಿ) ಮತ್ತು ಇತರೆ ಬಿ.ಎಸ್ಸಿ., ಪದವೀಧರರ ಅರ್ಜಿಗಳನ್ನು ಪ್ರತ್ಯೇಕವಾಗಿ ಕ್ರೂಢೀಕರಿಸಿ, ಆನ್‌ಲೈನ್ ಅರ್ಜಿಯಲ್ಲಿ ಭರ್ತಿ ಮಾಡಿರುವ ಮಾಹಿತಿ/ ವಿವರಗಳ ಆಧಾರದ ಅನ್ವಯ ಸಹಾಯಕ ನೆಡುತೋಪು ಅಧೀಕ್ಷಕರ ಹುದ್ದೆಗೆ ನಿಗಧಿಪಡಿಸಿದ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಗಳು ಗಳಿಸಿದ ಶೇಕಡವಾರು ಅಂಕಗಳ ಮೆರಿಟ್ ಆಧಾರದಲ್ಲಿ (ಎಲ್ಲಾ ವಾರ್ಷಿಕ/ ಸೆಮಿಸ್ಟರ್ ಪರೀಕ್ಷೆಗಳ ಅಂಕಗಳನ್ನು ಕೂಡಿ) ಮತ್ತು ಮೀಸಲಾತಿ ಪ್ರವರ್ಗವಾರು 1:20 (ಹುದ್ದೆ: ಅಭ್ಯರ್ಥಿ) ಅನುಪಾತದಲ್ಲಿ ಮೂಲ ದಾಖಲೆಗಳ ಪರಿಶೀಲನೆ, ದೇಹದಾರ್ಢ್ಯತೆ ಪರೀಕ್ಷೆ ಮತ್ತು ದೈಹಿಕ ತಾಳ್ವಿಕೆ ಪರೀಕ್ಷೆಗೆ ಹಾಜರಾಗಲು ಬಿ.ಎಸ್ಸಿ., (ಫಾರೆಸ್ಟ್ರಿ) ಮತ್ತು ಬಿ.ಎಸ್ಸಿ., ಪದವೀಧರ ಅಭ್ಯರ್ಥಿಗಳ ಪ್ರತ್ಯೇಕ ಪಟ್ಟಿಯನ್ನು ಮಾಡಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

1:20 (ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯನ್ನು ನಿಗಮದ ವೆಬ್‌ಸೈಟ್: www.kfdcl.kar.nic.in ನಲ್ಲಿ ಸಾರ್ವಜನಿಕ ಮಾಹಿತಿಗಾಗಿ ಪ್ರಕಟಪಡಿಸಲಾಗುವುದು. ಹಾಗೂ 1:20 (ಹುದ್ದೆ : ಅಭ್ಯರ್ಥಿ) ಅರ್ಹ ಅಭ್ಯರ್ಥಿಗಳು ತಮ್ಮ ಪ್ರವೇಶ ಪತ್ರವನ್ನು ನಿಗಮದ ವೆಬ್‌ಸೈಟಿನಿಂದ ಡೌನ್‌ಲೋಡ್ ಮಾಡುವುದು. ಇದನ್ನು ಹೊರತುಪಡಿಸಿ ಅಂಚೆ ಮುಖಾಂತರ ಪ್ರವೇಶ ಪತ್ರವನ್ನು ಕಳುಹಿಸಲಾಗುವುದಿಲ್ಲ.

**ವಿಶೇಷ ಸೂಚನೆ :** ಶೇಕಡವಾರು ಅಂಕಗಳನ್ನು ಲೆಕ್ಕ ಹಾಕುವಾಗ ಪಠ್ಯ ವಿಷಯದಲ್ಲಿ ಯಾವುದೇ ವಿಷಯದ ಅಂಕಗಳನ್ನು ಹೊರತುಪಡಿಸಲಾಗುವುದಿಲ್ಲ. (ಭಾಷಾ ವಿಷಯಗಳನ್ನೊಳಗೊಂಡಂತೆ) ನಿಗಧಿಪಡಿಸಿರುವ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಯು ಗಳಿಸಿರುವ ಎಲ್ಲಾ ವಿಷಯಗಳಲ್ಲಿನ ಒಟ್ಟು ಅಂಕಗಳು ಮತ್ತು ಆಯಾ ಪರೀಕ್ಷಾ ಮಂಡಳಿ ನಿಗಧಿಪಡಿಸಿರುವ ಗರಿಷ್ಠ ಅಂಕಗಳನ್ನು ಪರಿಗಣಿಸಿ ಅಭ್ಯರ್ಥಿಗಳ ಶೇಕಡವಾರು ಅಂಕಗಳನ್ನು ನಿಗಧಿಪಡಿಸಲಾಗುವುದು.

1:20 (ಹುದ್ದೆ: ಅಭ್ಯರ್ಥಿ) ಅನುಪಾತದ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ಮೂಲ ದಾಖಲೆ/ ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ ಮತ್ತು ದೈಹಿಕ ತಾಳ್ವಿಕೆ ಪರೀಕ್ಷೆಗಳಿಗೆ ಸೂಚಿತ ದಿನಾಂಕದಂದು ಹಾಜರಾಗಲು ತಿಳಿಸಲಾಗುವುದು. ಸದರಿ ಸೂಚಿತ ದಿನಾಂಕದಂದು ಅರ್ಹ ಅಭ್ಯರ್ಥಿಗಳು ಮೂಲ ದಾಖಲೆ/ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಂಬಂಧಿಸಿದ ಅಧಿಕಾರಿಯ ಎದುರು ಹಾಜರುಪಡಿಸಬೇಕು. ಮೂಲ ದಾಖಲೆ/ ಪ್ರಮಾಣ ಪತ್ರಗಳ ಪರಿಶೀಲನೆಯಲ್ಲಿ ಅರ್ಜಿಯಲ್ಲಿ ನಮೂದಿಸಿದ ಮಾಹಿತಿ/ ವಿವರಗಳಿಗೆ ಪೂರಕ ಮತ್ತು ಸರಿಯಾದ ಮೂಲ ದಾಖಲೆ/ ಪ್ರಮಾಣ ಪತ್ರಗಳನ್ನು ಹಾಜರುಪಡಿಸಿದ ಅಭ್ಯರ್ಥಿಗಳು ಮಾತ್ರ ಶಾರೀರಿಕ ಮಾನದಂಡ ಕುರಿತು ನಿಗಧಿಪಡಿಸಿದ ದೇಹದಾರ್ಢ್ಯತೆ

ಪರೀಕ್ಷೆಗೆ ಅರ್ಹತೆ ಹೊಂದುತ್ತಾರೆ. ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದವರು ಮಾತ್ರ ಮುಂದಿನ ಹಂತದ ದೈಹಿಕ ತಾಳ್ವಿಕೆ ಪರೀಕ್ಷೆಗೆ ಅರ್ಹತೆ ಹೊಂದುತ್ತಾರೆ. ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ನಿಗಧಿಪಡಿಸಿರುವ ಲಿಖಿತ Aptitude ಪರೀಕ್ಷೆಗೆ ಹಾಜರಾಗಲು ಅರ್ಹರಾಗುತ್ತಾರೆ.

9.2.6 ನೇಮಕಾತಿಗಾಗಿ ನಿಗಮವು ನಡೆಸುವ ಲಿಖಿತ Aptitude ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಪಡೆದ ಒಟ್ಟು ಅಂಕಗಳ ಶೇಕಡವಾರು ಪ್ರಮಾಣದ ಅರ್ಧ ಭಾಗ ಹಾಗೂ ಸಹಾಯಕ ನೆಡುತೋಪು ಅಧೀಕ್ಷಕರ ಹುದ್ದೆಗೆ ನಿಗಧಿಪಡಿಸಿದ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ (ಎಲ್ಲಾ ವಾರ್ಷಿಕ/ ಸೆಮಿಸ್ಟರ್ ಪರೀಕ್ಷೆಗಳ ಅಂಕಗಳನ್ನು ಕೂಡಿ – ಭಾಷಾ ಪರೀಕ್ಷೆಯ ಪತ್ರಿಕೆಗಳು ಸೇರಿದಂತೆ) ಅಭ್ಯರ್ಥಿಗಳು ಪಡೆದ ಒಟ್ಟು ಅಂಕಗಳ ಶೇಕಡವಾರು ಪ್ರಮಾಣದ ಅರ್ಧ ಭಾಗವನ್ನು ಕ್ರೋಢೀಕರಿಸಿ, ಅಭ್ಯರ್ಥಿಗಳು ಪಡೆದ ಅಂಕಗಳ ಮೆರಿಟ್ ಆಧಾರದಲ್ಲಿ ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಅನ್ವಯ ಬಿ.ಎಸ್ಸಿ., (ಫಾರೆಸ್ಟ್ರಿ) ಮತ್ತು ಬಿ.ಎಸ್ಸಿ., ಪದವೀಧರ ಅಭ್ಯರ್ಥಿಗಳ ಮೆರಿಟ್ ಅನ್ನು ಪ್ರತ್ಯೇಕವಾಗಿ ನಿಗಧಿಪಡಿಸಲಾಗುವುದು.

9.2.7 **ಮೂಲ ದಾಖಲೆ/ ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆಗಳು :**

ಮೂಲ ದಾಖಲೆ/ ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆಗಳನ್ನು ಸಂಬಂಧಿಸಿದ ಪರೀಕ್ಷಾ ಕೇಂದ್ರಗಳಲ್ಲಿ ಸೂಚಿತ ದಿನಾಂಕಗಳಂದು ನಡೆಸಲಾಗುವುದು.

**ಮೂಲ ದಾಖಲೆ/ ಪ್ರಮಾಣ ಪತ್ರಗಳ ಪರಿಶೀಲನೆ :**

1:20 (ಹುದ್ದೆ: ಅಭ್ಯರ್ಥಿ) ಅನುಪಾತದ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿ/ ವಿವರಗಳಿಗೆ ಪೂರಕವಾಗಿ ವಯಸ್ಸು, (ಜನ್ಮ ದಿನಾಂಕ ತಿಳಿಯಲು ಎಸ್.ಎಸ್.ಎಲ್.ಸಿ ಅಂಕಪಟ್ಟಿ/ ಶಾಲಾ ದಾಖಲಾತಿ ಪ್ರಮಾಣ ಪತ್ರಗಳು) ಶೈಕ್ಷಣಿಕ ಅರ್ಹತೆ, ಮೀಸಲಾತಿ, ಶುಲ್ಕ ಪಾವತಿಸಿದ ಬಗ್ಗೆ ರಶೀದಿ, ಇತ್ಯಾಧಿ ಬಗ್ಗೆ ಮೂಲ ದಾಖಲೆ/ ಪ್ರಮಾಣ ಪತ್ರಗಳನ್ನು ಮತ್ತು ಇವುಗಳ ಒಂದು ಜೆರಾಕ್ಸ್ ಪ್ರತಿಯನ್ನು ಸೂಚಿತ ದಿನಾಂಕದಂದು ಸಂಬಂಧಿಸಿದ ಅಧಿಕಾರಿಯ ಎದುರು ಪರೀಶೀಲನೆಗೆ ಕಡ್ಡಾಯವಾಗಿ ಹಾಜರುಪಡಿಸಬೇಕು. ಸದರಿ ಮೂಲ ದಾಖಲೆ/ ಪ್ರಮಾಣ ಪತ್ರಗಳನ್ನು ಹಾಜರುಪಡಿಸಲು ಯಾವುದೇ ಕಾರಣಕ್ಕೂ ಮತ್ತು ಯಾವುದೇ ಸನ್ನಿವೇಶದಲ್ಲಿಯೂ ಕಾಲ ವಿಸ್ತರಣೆ ನೀಡಲಾಗುವುದಿಲ್ಲ. ಅಭ್ಯರ್ಥಿಯು ತನ್ನ ಅರ್ಜಿ ನಮೂನೆಯಲ್ಲಿ ನಮೂದಿಸಿರುವ ಮಾಹಿತಿ/ ವಿವರಗಳನ್ನು ನಿಯಮಾನುಸಾರ ಪರಿಗಣಿಸಲಾಗುವುದು. ಒಂದು ವೇಳೆ ನಮೂದಿಸಿರುವ ಮಾಹಿತಿಗೆ ವ್ಯತಿರಿಕ್ತ ದಾಖಲೆ/ ಪ್ರಮಾಣ ಪತ್ರಗಳನ್ನು ಸಲ್ಲಿಸಿದ್ದಲ್ಲಿ ಅಂತಹ ದಾಖಲೆ/ ಪ್ರಮಾಣ ಪತ್ರಗಳನ್ನು ಪರಿಗಣನೆಗೆ ತೆಗೆದುಕೊಂಡು ಬದಲಾವಣೆ ಮಾಡಲಾಗುವುದಿಲ್ಲ. ಮೂಲ ದಾಖಲೆ/ ಪ್ರಮಾಣ ಪತ್ರಗಳನ್ನು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸದ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು ಹಾಗೂ ಅವರನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವಾಗ ಸಹಾಯಕ ನೆಡುತೋಪು ಅಧೀಕ್ಷಕರ ಹುದ್ದೆಗೆ ನಿಗಧಿಪಡಿಸಿರುವ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ ಆಯಾ ವಿಶ್ವವಿದ್ಯಾಲಯವು ನಿಗಧಿಪಡಿಸಿರುವ ಗರಿಷ್ಠ ಅಂಕಗಳನ್ನು ಹಾಗೂ ಅಭ್ಯರ್ಥಿಯು ಎಲ್ಲಾ ವಿಷಯಗಳಲ್ಲಿ ಗಳಿಸಿರುವ ಒಟ್ಟು ಅಂಕಗಳನ್ನು (ಎಲ್ಲಾ ವಾರ್ಷಿಕ/ ಸೆಮಿಸ್ಟರ್ ಪರೀಕ್ಷೆಗಳ ಅಂಕಗಳನ್ನು ಕೂಡಿ) ತನ್ನ ಅರ್ಜಿಯಲ್ಲಿ ಸರಿಯಾಗಿ ಮತ್ತು ಸ್ಪಷ್ಟವಾಗಿ ನಮೂದಿಸುವುದು. ಅಸ್ಪಷ್ಟ/ ತಪ್ಪು/ ಅಪೂರ್ಣ ಮಾಹಿತಿ ನೀಡಿದ್ದಲ್ಲಿ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು ಹಾಗೂ ಅವರನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

ಅಭ್ಯರ್ಥಿಯು ಅರ್ಜಿ ನಮೂನೆಯಲ್ಲಿ ಮೀಸಲಾತಿ ಮತ್ತು ಕೋರುವ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ಅರ್ಜಿಯಲ್ಲಿ ನೀಡಿರುವ ಸಂಬಂಧಿಸಿದ ಕಾಲಂಗಳಲ್ಲಿ ತಪ್ಪದೇ ನಮೂದಿಸಬೇಕು. ಒಂದು ವೇಳೆ ಸದರಿ ವಿವರಗಳನ್ನು ಅರ್ಜಿಯಲ್ಲಿ ನಮೂದಿಸದಿದ್ದರೆ ಅಂತಹ ಅಭ್ಯರ್ಥಿಯು ಮೀಸಲಾತಿ/ ಕೋರುವ ಇತರೆ ಸೌಲಭ್ಯಗಳಿಂದ ವಂಚಿತರಾಗುತ್ತಾರೆ.

ಮೂಲ ದಾಖಲೆಗಳ ಪರಿಶೀಲನೆ ಬಳಿಕ ಅನರ್ಹರಾಗುವ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. ಮೂಲ ದಾಖಲೆಗಳ ಪರಿಶೀಲನೆಯ ಬಳಿಕ ಅರ್ಹರಾಗುವ ಅಭ್ಯರ್ಥಿಗಳನ್ನು ಮಾತ್ರ ಮುಂದಿನ ಹಂತದ ದೇಹದಾರ್ಢ್ಯತೆ ಪರೀಕ್ಷೆಗೆ ಪರಿಗಣಿಸಲಾಗುವುದು.

9.2.8 **ದೇಹದಾರ್ಢ್ಯತೆ ಪರೀಕ್ಷೆ :**

ಶಾರೀರಿಕ ಮಾನದಂಡಗಳು (Physical Standards): ಶಾರೀರಿಕ ಮಾನದಂಡಗಳನ್ನು ಈ ಕೆಳಗಿನಂತೆ ನಿಗಧಿಪಡಿಸಲಾಗಿದೆ:–

| | | |
|---|---|---|
| **ಪುರುಷ ಅಭ್ಯರ್ಥಿಗಳಿಗೆ** | | |
| 1 | ಎತ್ತರ | ಕನಿಷ್ಠ 163 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 79 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |
| **ಮಹಿಳಾ ಅಭ್ಯರ್ಥಿಗಳಿಗೆ** | | |
| 1 | ಎತ್ತರ | ಕನಿಷ್ಠ 150 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 74 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |

ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಮಾತ್ರ ಮುಂದಿನ ಹಂತದ ದೈಹಿಕ ತಾಳ್ವಿಕೆ ಪರೀಕ್ಷೆಗೆ ಪರಿಗಣಿಸಲಾಗುವುದು. ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

9.2.9 **ದೈಹಿಕ ತಾಳ್ವಿಕೆ ಪರೀಕ್ಷೆ (Physical Endurance Test) :**

| | | |
|---|---|---|
| ಪುರುಷ ಅಭ್ಯರ್ಥಿಗಳಿಗೆ | : | 25 ಕಿ.ಮೀ. ಕಾಲು ನಡಿಗೆ ಗರಿಷ್ಠ 4 ಗಂಟೆಗಳ ಅವಧಿಯಲ್ಲಿ ಪೂರೈಸಬೇಕು |
| ಮಹಿಳಾ ಅಭ್ಯರ್ಥಿಗಳಿಗೆ | : | 16 ಕಿ.ಮೀ. ಕಾಲು ನಡಿಗೆ ಗರಿಷ್ಠ 4 ಗಂಟೆಗಳ ಅವಧಿಯಲ್ಲಿ ಪೂರೈಸಬೇಕು |

ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ಮುಂದಿನ ಹಂತದ ಲಿಖಿತ Aptitude ಪರೀಕ್ಷೆಗೆ ಹಾಜರಾಗಲು ಅರ್ಹತೆ ಪಡೆಯುತ್ತಾರೆ. ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. ಯಾವುದೇ ಹಂತದಲ್ಲಿ ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅನರ್ಹರಾದಲ್ಲಿ ಅಥವಾ ಪರೀಕ್ಷೆ ನಡೆಯುವ ಸಮಯದಲ್ಲಿ ಗಾಯಗೊಂಡಲ್ಲಿ ಅಥವಾ ಇನ್ನಿತರ ಯಾವುದೇ ಕಾರಣಕ್ಕಾಗಿ ಅನರ್ಹರಾದ ಅಭ್ಯರ್ಥಿಗಳಿಗೆ ಇನ್ನೊಂದು ಅವಕಾಶ ನೀಡಲಾಗುವುದಿಲ್ಲ.

**ವಿಶೇಷ ಸೂಚನೆ:** ಈ ದೈಹಿಕ ತಾಳ್ವಿಕೆ ಪರೀಕ್ಷೆ ನಡೆಯುವ ಸಮಯದಲ್ಲಿ ಯಾವ ನಿಯಮ ಜಾರಿಯಲ್ಲಿರುತ್ತದೆಯೋ ಅದರಂತೆ ಮಾನದಂಡ ವಿಧಿಸಲಾಗುವುದು.

9.2.10 **ಲಿಖಿತ Aptitude ಪರೀಕ್ಷೆ :**

ಸಹಾಯಕ ನೆಡುತೋಪು ಅಧೀಕ್ಷಕರ ಹುದ್ದೆಗೆ ಲಿಖಿತ Aptitude ಪರೀಕ್ಷೆಯ ಪ್ರಶ್ನೆ ಪತ್ರಿಕೆಯು ಸದರಿ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯ ಮಟ್ಟದಲ್ಲಿದ್ದು, **ಬಹು ಆಯ್ಕೆ** (Objective multiple choice) ಮಾದರಿಯದ್ದಾಗಿರುತ್ತದೆ. ಲಿಖಿತ Aptitude ಪರೀಕ್ಷೆಯ ಪ್ರಶ್ನೆ ಪತ್ರಿಕೆಯು ನೂರು (100) ಅಂಕಗಳದ್ದಾಗಿದ್ದು, 3 (ಮೂರು) ಗಂಟೆಗಳ ಅವಧಿಯಲ್ಲಿ ಉತ್ತರಿಸಬೇಕಾಗಿದೆ. ಬಿ.ಎಸ್ಸಿ., (ಫಾರೆಸ್ಟ್ರಿ) ಮತ್ತು ಬಿ.ಎಸ್ಸಿ., ಪದವೀಧರರಿಗೆ ಪ್ರತ್ಯೇಕವಾಗಿ ಪರೀಕ್ಷೆಗಳನ್ನು ನಡೆಸಲಾಗುವುದು.

**ಲಿಖಿತ ಪರೀಕ್ಷೆಯ ವಿಷಯಗಳು :**

ಲಿಖಿತ ಪರೀಕ್ಷೆಯ ಪಠ್ಯಕ್ರಮವನ್ನು (Syllabus) ನ್ನು ಪ್ರತ್ಯೇಕವಾಗಿ ನಿಗಮದ ವೆಬ್‌ಸೈಟಿನಲ್ಲಿ ಪ್ರಕಟಿಸಲಾಗುವುದು.

**ಲಿಖಿತ Aptitude ಪರೀಕ್ಷಾ ಕೇಂದ್ರ :**

ಲಿಖಿತ ಪರೀಕ್ಷೆ ನಡೆಸುವ ದಿನಾಂಕ ಹಾಗೂ ಸ್ಥಳವನ್ನು ನಿಗಮದ ವೆಬ್‌ಸೈಟಿನಲ್ಲಿ ಪ್ರಕಟಿಸಲಾಗುವುದು.

**ವಿಶೇಷ ಸೂಚನೆ : ಅಭ್ಯರ್ಥಿಗಳು ನೇಮಕಾತಿ ಪರೀಕ್ಷೆಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.**

**ಲಿಖಿತ Aptitude ಪರೀಕ್ಷೆ ಬರೆಯುವ ಭಾಷೆ :**

ಲಿಖಿತ Aptitude ಪರೀಕ್ಷೆ ಬರೆಯಲು ಅಭ್ಯರ್ಥಿಗಳು ಕನ್ನಡ ಅಥವಾ ಆಂಗ್ಲ ಭಾಷೆಯನ್ನು ಆಯ್ದುಕೊಳ್ಳಬಹುದಾಗಿದೆ. ಅಭ್ಯರ್ಥಿಯು ಆಯ್ದುಕೊಂಡ ಪರೀಕ್ಷೆ ಬರೆಯುವ ಭಾಷೆಯನ್ನು ಅರ್ಜಿಯ ಸಂಬಂಧಿಸಿದ ಕಾಲಂನಲ್ಲಿ ತಪ್ಪದೆ ನಮೂದಿಸಬೇಕು. ಅಭ್ಯರ್ಥಿಯು ಅರ್ಜಿಯಲ್ಲಿ ಒಂದು ಸಾರಿ ನಮೂದಿಸಿರುವ ಲಿಖಿತ Aptitude ಪರೀಕ್ಷೆ ಬರೆಯುವ ಭಾಷೆ ಯಾವುದೇ ಕಾರಣಕ್ಕೂ ಯಾವುದೇ ಹಂತದಲ್ಲಿಯೂ ಬದಲಾವಣೆ ಮಾಡಲು ಅವಕಾಶವಿರುವುದಿಲ್ಲ.

9.2.11 ಎಸ್.ಎಸ್.ಎಲ್.ಸಿ ಹಾಗೂ ಅದಕ್ಕಿಂತ ಮೇಲ್ಮಟ್ಟದ ವಿದ್ಯಾಭ್ಯಾಸದಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಸಿಸದೇ ಇರುವ ಅಭ್ಯರ್ಥಿಗಳಿಗೆ ಕರ್ನಾಟಕ ಸಿವಿಲ್ ಸೇವೆಗಳು (ನೇಮಕಾತಿ) (ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1984ಕ್ಕೆ ಪೂರಕವಾಗಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಎಸ್‌ಸಿಆರ್ 84, ದಿನಾಂಕ 23–9–1985 ರಲ್ಲಿ ಸೂಚಿಸಿದ ಪ್ರಕಾರ ಅಂತಹ ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಲು ನಿಗಧಿಪಡಿಸಿದ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರವೇ ಅಭ್ಯರ್ಥಿಗಳು ನೇಮಕಾತಿ ಹೊಂದಲು ಅರ್ಹರಾಗುತ್ತಾರೆ. ಕನ್ನಡ ಭಾಷಾ ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**ಕನ್ನಡ ಭಾಷಾ ಪರೀಕ್ಷೆಯ ಪಠ್ಯಕ್ರಮ :**

ಕನ್ನಡ ಭಾಷಾ ಪರೀಕ್ಷೆಯನ್ನು ಎರಡು ಹಂತದಲ್ಲಿ ನಡೆಸಲಾಗುತ್ತದೆ. ಇದರ ವಿವರ ಕೆಳಗೆ ನಮೂದಿಸಿದೆ. ಸಮಯ: 1:00 ಗಂಟೆ

| | | |
|---|---|---|
| **ಮೊದಲನೇ ಹಂತ – ಲಿಖಿತ ಪರೀಕ್ಷೆ:** | **ಲಿಖಿತ ಪರೀಕ್ಷೆಗೆ ಕನ್ನಡ ಶಾಲಾ ನಾಲ್ಕನೇ ತರಗತಿಯ ಕನ್ನಡ ಮುಖ್ಯ ಪಠ್ಯಪುಸ್ತಕ ಹಾಗೂ ವಿವಿಧ ಲೇಖಕರು ಬರೆದ ಕರ್ನಾಟಕ ವಯಸ್ಕರ ಶಿಕ್ಷಣ ಪರಿಷತ್ತು ಪ್ರಕಟಿಸಿರುವ "ಸತ್ಯಕ್ಕೆ ಬೆಲೆ ಕೊಟ್ಟ ಗೆಳೆಯರು" ಎಂಬ ಪಾಠದಿಂದ ಆರಂಭವಾಗುವ ಸಣ್ಣಕಥೆಗಳು ಇವುಗಳಿಂದ ಪ್ರಶ್ನೆಗಳನ್ನು ಕೊಡಲಾಗುವುದು.** | **90 ಅಂಕಗಳು** |
| **ಎರಡನೇ ಹಂತ – ಮೌಖಿಕ ಪರೀಕ್ಷೆ** | **ಅ) ಮುದ್ರಿತ ಹಾಗೂ ಹಸ್ತ ಪ್ರತಿಗಳನ್ನು ಓದುವುದು.**<br>**ಆ) ಅರ್ಜಿಗಳನ್ನು ಓದಿ ವಿವರಿಸುವುದು**<br>**ಇ) ಸಂಭಾಷಣೆ ನಡೆಸುವುದು** | **10 ಅಂಕಗಳು** |

ಈ ಕೆಳಗಿನ ಮಟ್ಟದಲ್ಲಿ ಮೂರು ವಿಧದಲ್ಲಿ ಕನಿಷ್ಟ ಅಂಕಗಳನ್ನು ಪಡೆದವರು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವರೆಂದು ಪರಿಗಣಿಸಲಾಗುವುದು.

| | | |
|---|---|---|
| (ಅ) | **ಲಿಖಿತ ಪರೀಕ್ಷೆಯಲ್ಲಿ ಪಡೆಯತಕ್ಕ ಕನಿಷ್ಠ ಅಂಕಗಳು** | **30** |
| (ಆ) | **ಮೌಖಿಕ ಪರೀಕ್ಷೆಯಲ್ಲಿ ಪಡೆಯತಕ್ಕ ಕನಿಷ್ಟ ಅಂಕಗಳು** | **3** |
| (ಇ) | **ಲಿಖಿತ ಪರೀಕ್ಷೆಯಲ್ಲಿ ಮತ್ತು ಮೌಖಿಕ ಪರೀಕ್ಷೆಯಲ್ಲಿ ಒಟ್ಟಿಗೆ ಕನಿಷ್ಟ ಅಂಕಗಳು** | **35** |

